ಓಂ ನಮೊ ಭಗವತೆ ಶಂಕರಾನಂದಾಯ



ಓಂ ಪಾರ್ಥಾಯ ಪ್ರತಿಬೋಧಿತಾಂ ಭಗವತಾ ನಾರಾಯಣೇನ ಸ್ವಯಮ್ ।

## ಮೂರನೆಯ ಅಧ್ಯಾಯ

# ಕರ್ಮಯೋಗ

### ಸ್ವಾಮಿ ಶ್ರೀ ಶಂಕರಾನಂದಜೀಯವರ ಗೀತೋಪನ್ಯಾಸಗಳು


ಪ್ರಚಾರಕರು :

**ಶ್ರೀಸ್ವಾಮಿಶಂಕರಾನಂದ ವಿಶ್ವಸ್ಥ ಸಮಿತಿ (ರಿ)**

**ಶ್ರೀ ಶಿವಾನಂದಾಶ್ರಮ**

ಅಜ್ಜಂಪುರ (ಕರ್ನಾಟಕ)

1979

**ಬೆಲೆ ರೂ. 2-00**

# ಪ್ರಾರ್ಥನೆ

ಪರಮ ಪೂಜ್ಯನಾದ ಭಗವಂತನೇ! ಜಗತ್ತಿನಲ್ಲಿ ಪೂರ್ಣ ಶಾಂತಿ ನೆಲೆಗೊಳ್ಳಲಿ; ಎಲ್ಲಾ ಜನಾಂಗಗಳು, ಎಲ್ಲಾ ಜಾತಿಗಳು ಶುದ್ಧ ಪ್ರೇಮದ ಬಂಧನದಿಂದ ಒಟ್ಟುಗೂಡಲಿ. ಸರ್ವರೂ ಶಾಂತಿ ಮತ್ತು ಸುಖವನ್ನು ಅನುಭವಿಸಲಿ. ಜಗತ್ತಿನಲ್ಲಿ ಎಲ್ಲೆಲ್ಲಿಯೂ ಪೂರ್ಣ ಶಾಂತಿ ನೆಲೆಗೊಳ್ಳಲಿ. ಜಗತ್ತಿನ ಮಾನವರಾದ ನಮಗೆ ಶಾಶ್ವತ ಶಾಂತಿಯನ್ನು ಅವಾಙ್ಮಾನಸಗೋಚರ ಶಾಂತಿಯನ್ನು ಕರುಣಿಸಲಿ. ಲೋಕಕಲ್ಯಾಣಕ್ಕಾಗಿ ನಾವು ಐಕ್ಯಮತ್ಯದಿಂದ ದುಡಿಯುವಂತೆ ಬುದ್ಧಿಯನ್ನು ಕೊಡು. ನಮ್ಮನ್ನು ವಿಶ್ವಪ್ರೇಮವೂ, ವಿಶ್ವಬಂಧುತ್ವವೂ ಉಳ್ಳವರಾಗುವಂತೆ ಕರುಣಿಸು. ನಾವು ಎಲ್ಲಾ ನಾಮರೂಪಗಳಲ್ಲಿಯೂ ನಿನ್ನನ್ನು ನೋಡಿ ಆನಂದಿಸುವಂತೆ ಅನುಗ್ರಹಿಸು.

ಹೇ ದಯಾಮಯನಾದ ಪರಮೇಶ್ವರನೇ! ಮಾನವರಿಗೆ ಯುಕ್ತಾಯುಕ್ತವನ್ನು ಅರಿಯುವ ಬುದ್ಧಿಯನ್ನೂ, ಭೂತ ದಯೆ, ಸಹನ ಶೀಲತೆ ಮತ್ತು ಪರಿಸ್ಥಿತಿಗೆ ಹೊಂದಿಕೊಳ್ಳುವ ಶಕ್ತಿಯನ್ನೂ ದಯಪಾಲಿಸು

ಹೇ ಸರ್ವಾಂತರ್ಯಾಮಿ! ಎಲ್ಲೆಲ್ಲಿಯೂ ಆತ್ಮನನ್ನು ನೋಡುವ ಅದ್ವೈತ ಬುದ್ಧಿಯನ್ನು ಎಲ್ಲರಿಗೂ ದಯಪಾಲಿಸು

ಓಂ ಶಾಂತಿಃ ಶಾಂತಿಃ ಶಾಂತಿಃ

– ಶ್ರೀ ಸ್ವಾಮಿ ಶಂಕರಾನಂದ

ಓಂ ನಮೋ ಭಗವತೆ ಶಂಕರಾನಂದಾಯ



ಓಂ ಪಾರ್ಥಾಯ ಪ್ರತಿಬೋಧಿತಾಂ ಭಗವತಾ ನಾರಾಯಣೇನ ಸ್ವಯಮ್ ।

# ಮೂರನೆಯ ಅಧ್ಯಾಯ

# ಕರ್ಮಯೋಗ

**ಸ್ವಾಮಿ ಶ್ರೀ ಶಂಕರಾನಂದಜೀಯವರ ಗೀತೋಪನ್ಯಾಸಗಳು**

ಪ್ರಚಾರಕರು :

**ಶ್ರೀಸ್ವಾಮಿಶಂಕರಾನಂದ ವಿಶ್ವಸ್ಥ ಸಮಿತಿ ( ರಿಜಿಸ್ಟರ್ಡ್ )**

**ಶ್ರೀ ಶಿವಾನಂದಾಶ್ರಮ**

**ಅಜ್ಜಂಪುರ (ಕರ್ನಾಟಕ)**

1979 **ಬೆಲೆ ರೂ. 2-00**

ಪ್ರಕಾಶಕರು :
ಶ್ರೀಸ್ವಾಮಿಶಂಕರಾನಂದ ವಿಶ್ವಸ್ಥ ಸಮಿತಿ (ರಿ)
ಶ್ರೀ ಶಿವಾನಂದಾಶ್ರಮ
ಅಜ್ಜಂಪುರ (ಕರ್ನಾಟಕ)





ಪ್ರಥಮ ಮುದ್ರಣ ಆಗಸ್ಟ್ ೧೯೬೩ – ೧,೦೦೦ ಪ್ರತಿಗಳು
ದ್ವಿತೀಯ ಮುದ್ರಣ . ಆಗಸ್ಟ್ ೧೯೭೩ – ೨,೦೦೦ ಪ್ರತಿಗಳು
ತೃತೀಯ ಮುದ್ರಣ : ಅಕ್ಟೋಬರ್ ೧೯೭೯ – ೨,೦೦೦ ಪ್ರತಿಗಳು

**ಬೆಲೆ ರೂ. 2-00**

ಕಷ್ಟಗಳು ಜ್ಞಾನಕ್ಕೆ ದೀಪಗಳು
ವಿಷಯಗಳು ವಿಷಕ್ಕೆ ಸಮಾನ
ಮೋಹವೇ ಬಂಧ

ಮುದ್ರಣ
**ಕೂರ್ಗ್ ಪ್ರಿಂಟಿಂಗ್ ಪ್ರೆಸ್**
ರಾಜಾಮಹಲ್ ಗುಟ್ಟಹಳ್ಳಿ, ಬೆಂಗಳೂರು–೫೬೦ ೦೦೩



ಶ್ರೀ ಶೃಂಗೇರಿ ಶಾರದಾಪೀಠದ ಶ್ರೀ ಶ್ರೀ ಜಗದ್ಗುರುಗಳವರು
**ಶ್ರೀಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರ**
**ಅರವತ್ತಮೂರನೆಯ ಜನ್ಮದಿನೋತ್ಸವ**

ಹಾಗೂ

**ಪೀಠಾರೋಹಣ ರಜತ ಮಹೋತ್ಸವದ ಶುಭ ನೆನಪಿಗಾಗಿ**



ಶ್ರೀ ಶ್ರೀ ಶ್ರೀ ಸ್ವಾಮಿ ಶಂಕರಾನಂದಜಿ

ಓಂ

# ಮೂರನೆಯ ಪುನರ್ಮುದ್ರಣದ ಸಮರ್ಪಣೆ

ಯಾವ ಗುರುದೇವರು ತಮ್ಮ ಜೀವಿತ ಕಾಲವನ್ನೆಲ್ಲಾ ಶ್ರೀ ಗೀತಾಮಾತೆಯ ಪ್ರಚಾರಕ್ಕಾಗಿಯೇ ವಿನಿಯೋಗಿಸಿ ಅವಿಶ್ರಾಂತವಾಗಿ ಪ್ರವಾಸ ಮತ್ತು ಪ್ರವಚನಗಳನ್ನು ಮಾಡಿ ಲಕ್ಷಾಂತರ ಮುಮುಕ್ಷುಗಳನ್ನು ಆಕರ್ಷಿಸಿದರೋ! ಯಾವ ಗುರುದೇವರ ಪ್ರವಚನಗಳನ್ನು ಪಂಡಿತರೂ ಮತ್ತು ಪಾಮರರೂ ಮಂತ್ರಮುಗ್ಧರಂತೆ ಶ್ರವಣ ಮಾಡಿ ಆನಂದಿಸುತ್ತಿದ್ದರೋ! ಯಾವ ಗುರುದೇವರು ಎಲ್ಲಾ ಆಚಾರ್ಯರುಗಳ ಶ್ರೀಮದ್ಭಗವದ್ಗೀತಾ ಟೀಕೆಗಳನ್ನು ಸಮನ್ವಯಗೊಳಿಸಿ ತಮ್ಮ ಐಂದ್ರಜಾಲಿಕವಾದ ಪ್ರವಚನಗಳಿಂದ ಶ್ರೋತೃಗಳ ಚಿತ್ತಶುದ್ಧಿಯನ್ನು ಮಾಡಿ ಅಂತಃಕರಣಗಳಲ್ಲಿದ್ದ ತಪ್ಪು ಕಲ್ಪನೆಗಳೆಂಬ ಕಿಲುಬನ್ನು ತೆಗೆದು ಸ್ವಸ್ವರೂಪದ ಅನುಭವವನ್ನು ಮಾಡಿಸಿದರೋ! ಯಾವ ಗುರುದೇವರು ಎಡಬಿಡದೆ ದುಡಿದರೂ ಕರ್ಮ ಸಂಕೋಲೆಯಿಂದ ಮುಕ್ತರಾಗಿದ್ದು ಭಕ್ತರೆಲ್ಲರಿಗೂ ಕರ್ಮ – ಫಲ – ಭೋಗ – ವಾಸನೆ – ಜನ್ಮ – ಕರ್ಮ ಎಂಬ ಚಕ್ರದ ರಹಸ್ಯವನ್ನು ಅರಿವು ಮಾಡಿಸಿ ಅಸಂಗತ್ವಭಾವವನ್ನು ಮೂಡಿಸಿ ಅಪ್ಪಟ ಕರ್ಮಯೋಗಿಗಳನ್ನಾಗಿ ಮಾಡಿದರೋ, ಅಂತಹ ಸದ್ಗುರು ದೇವರಾದ ಬ್ರಹ್ಮಲೀನ ಶ್ರೀ ಶ್ರೀ ಶ್ರೀ ಸ್ವಾಮಿ ಶಂಕರಾನಂದ ಮಹಾಸ್ವಾಮಿಯವರಿಗೆ ಅವರ ಪ್ರವಚನಗಳಿಂದ ಮೂಡಿಬಂದ ಕರ್ಮಯೋಗವೆಂಬ ಮೂರನೆಯ ಅಧ್ಯಾಯದ ಮೂರನೆಯ ಪುನರ್ಮುದ್ರಣವನ್ನು ಶ್ರದ್ಧೆ ಮತ್ತು ಭಕ್ತಿಗಳಿಂದ ಸಮರ್ಪಿಸುತ್ತಿದ್ದೇವೆ.

—ಪ್ರಕಾಶಕರು

# ಎರಡು ನುಡಿಗಳು

ಈಗ ಹೊರಗೆ ಬರುವುದು ಕರ್ಮಯೋಗ. ಈ ಕರ್ಮಯೋಗವನ್ನು ವಾಚಕರ ಕೈಯಲ್ಲಿ ಕೊಡುವುದಕ್ಕೆ ಬಹಳ ಸಂತೋಷವಾಗುತ್ತದೆ ಪ್ರತಿ ಕ್ಷಣ ಬದಲಾಗುತ್ತಿರುವ ಈ ಲೋಕದಲ್ಲಿ ಯಾವುದಾದರೊಂದು ಕೆಲಸವನ್ನು ಮಾಡಿ ಮುಗಿಸುವುದೆಂದರೆ ಈಶ್ವರಾನುಗ್ರಹ ಬೇಕು.

## ಕರ್ಮಯೋಗವೆಂದರೇನು ?

ಕರ್ಮ ಮಾಡಿದರೆ ಫಲ ಬರುತ್ತದೆ. ಮಾಡಿದವನು ಬಂದ ಫಲವನ್ನು ಭೋಗಿಸುತ್ತಾನೆ. ಭೋಗವು ವಾಸನೆಯನ್ನುಳಿಸಿ ಹೋಗುತ್ತದೆ. ವಾಸನೆಯು ಜನ್ಮಕ್ಕೆ ಕಾರಣವಾಗುತ್ತದೆ ಈ ರೀತಿ ಕರ್ಮಫಲ–ಭೋಗ–ವಾಸನೆ–ಜನ್ಮ–ಪುನಃ ಕರ್ಮ ಈ ರೀತಿ ಸಂಕೋಲೆಯು ಬೀಳುತ್ತದೆ ಈ ಸಂಕೋಲೆಯಿಂದ ಜೀವಾತ್ಮನು ಅನಂತ ಜನ್ಮಗಳಿಂದ ತಪ್ಪಿಸಿಕೊಳ್ಳಲಾರದೆ ಅನೇಕ ದುಃಖವನ್ನು ಅನುಭವಿಸುತ್ತಾನೆ. ಈ ರೀತಿ ಕರ್ಮವು ಪರಿಣಾಮದಲ್ಲಿ ಅನೇಕ ದುಃಖ ಕೊಡುತ್ತದೆ ಯಾಕೆಂದರೆ "ನಹಿಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್" ಎಂಬಂತೆ ದೇಹಧಾರಿಯು ಕರ್ಮವನ್ನು ಬಿಟ್ಟು ಇರಲಾರನು. ಮಾಡಿದರೆ ಅನಿಷ್ಟ ಪ್ರಾಪ್ತಿ; ಮಾಡದೆ ಇರಲಾಗುವುದಿಲ್ಲ. ತಪ್ಪಿಸಿಕೊಳ್ಳುವುದು ಹೇಗೆ ? ಅದಕ್ಕೊಂದು ದಾರಿ ಇದೆ. ಅದು ಯಾವುದು? ಕರ್ಮ ನಡೆಯಲಿ, ಫಲವು ಬೇಡ ಫಲಾಪೇಕ್ಷೆಯಿಲ್ಲದೆ ಮಾಡುವುದು, ಫಲವನ್ನು ಬಿಡುವುದು ಯಾವಾಗ ಸಂಭವಿಸುತ್ತದೆ ? ಕರ್ತೃತ್ವ ಬುದ್ಧಿಯನ್ನು ಬಿಟ್ಟಾಗ. ಕರ್ತೃತ್ವವನ್ನು ಬಿಟ್ಟರೆ ಸರ್ವ ಅನರ್ಥಗಳು ನಿವೃತ್ತಿಯಾಗುತ್ತವೆ "ನಾಹಂ ಕರ್ತಬಂಧ ಮೋಕ್ಷಾ ಕುತೇವೆ" ಎಂಬ ಆರ್ಯೋಕ್ತಿಯಂತೆ ಕರ್ತೃತ್ವ ಬುದ್ಧಿಯನ್ನು ಬಿಟ್ಟು ಕರ್ಮ ಮಾಡುವುದೇ ಕರ್ಮಯೋಗ. ಕರ್ತೃತ್ವ ಬಿಟ್ಟ ಮೇಲೆ ಆಗುವ ಕರ್ಮವು ಕರ್ಮವೇ ಅಲ್ಲ, ಅದು ಕರ್ಮಾಭಾಸವೆಂದು ತಿಳಿದುಕೊಳ್ಳಬೇಕು. ಇದೇ ವಿಷಯವನ್ನು ಈ ಮೂರನೆಯ

ಅಧ್ಯಾಯದಲ್ಲಿ ಬೋಧಿಸಿದೆ. ಇದನ್ನು ಓದಿ ಸರ್ವರೂ ಕರ್ಮಯೋಗಿಗಳಾಗಿ ಜೀವನವನ್ನು ಆನಂದಮಯವನ್ನಾಗಿ ಮಾಡಿಕೊಳ್ಳುವ ಸುಯೋಗವನ್ನು ಗೀತಾಮಾತೆಯು ದಯಪಾಲಿಸಲಿ.

ಅದೊಂದು ಅಪೂರ್ವ ಸನ್ನಿವೇಶ ತಾ|| ೮-೫-೬೩ ರಿಂದ ೧೦-೮-೬೩ ರ ವರೆಗೆ ಬೆಂಗಳೂರು ತೆಲುಗುಪೇಟೆಯಲ್ಲಿರುವ ಶ್ರೀ ಮಲ್ಲಿಕಾರ್ಜುನ ಸ್ವಾಮಿಯ ದೇವಸ್ಥಾನದಲ್ಲಿ ಗೀತಾ ಪ್ರವಚನವನ್ನು ಮಾಡುವ ಸುಯೋಗವು ದೇವಸ್ಥಾನದ ವ್ಯವಸ್ಥಾಪಕರಿಂದ ದೊರೆತಿತ್ತು. ಆಗ ನಮಗೆ ವಸತಿಗೆ, ಆಹಾರ ವಿಶ್ರಾಂತಿಗೆ ರಂಗಸ್ವಾಮಿಗುಡಿ ಬೀದಿಯಲ್ಲಿರುವ ತಮ್ಮ ಸ್ವಗೃಹದಲ್ಲಿ ಆತ್ಮೀಯರಾದ ಶ್ರೀ ನಂಜುಂಡರಾಯರು ಅನುಕೂಲಪಡಿಸಿದ್ದರು. ಅವರ ಮನೆಯಲ್ಲಿ ಇರುವಾಗ ಈ ಗ್ರಂಥವು ಬರೆದು ಅಚ್ಚಿಗೆ ತಯಾರಾಯಿತು. ಈ ರೀತಿ ಅನುಕೂಲಪಡಿಸಿದ ಶ್ರೀ ನಂಜುಂಡರಾಯರಿಗೂ ಅವರ ಕುಟುಂಬ ವರ್ಗಕ್ಕೂ ಗೀತಾಚಾರ್ಯನು ಆಯುಃರಾರೋಗ್ಯ ಸಂಪತ್ತನ್ನೂ ಸುಜ್ಞಾನ ವಿಜ್ಞಾನಗಳನ್ನೂ ದಯಪಾಲಿಸಲಿ.

—ಶ್ರೀ ಸ್ವಾಮಿ ಶಂಕರಾನಂದ

# ಕರ್ಮಯೋಗ ರಹಸ್ಯ

ಭಗವದ್ಗೀತೆ ಈ ದಿನದ ಪ್ರಪಂಚಕ್ಕೆ ಪ್ರಸಾದಿಸಿದ ಮಹಾಬೋಧೆ ಕರ್ಮಯೋಗ ರಹಸ್ಯವು "ಕರ್ಮಜ್ಯಾಯೋಹ ಕರ್ಮಣಃ" ಎಂದು ಭಗವಾನರು ಭಗವದ್ಗೀತೆಯಲ್ಲಿ ಒಂದು ಒಳ್ಳೆಯ ಮಹಾ ಮಂತ್ರವನ್ನು ಉಪದೇಶಿಸಿದ್ದಾರೆ

"ಕರ್ಮ ರಹಿತನಾಗಿ ಇರುವುದಕ್ಕಿಂತ ಕರ್ಮ ಮಾಡುವುದು ಶ್ರೇಷ್ಠವು" ಎಂದು ಇದರ ಅರ್ಥವು. ಈ ವಾಕ್ಯದ ಆಧಾರದಿಂದಲೇ ಶ್ರೀ ತಿಲಕ ಮಹಾಶಯರು ಭಗವದ್ಗೀತೆಯ ಮುಖ್ಯವಾದ ವಿಷಯವು ಕರ್ಮಯೋಗವೇ ಎಂದು ಸಿದ್ಧಮಾಡಿದ್ದಾರೆ

ಕರ್ಮಾತೀತವಾದ ಜ್ಞಾನಿಗಳಿಗೆ ಕರ್ಮ ಮಾಡಬೇಕೆಂಬ ವಿಧಿಯಿಲ್ಲ. "ತಸ್ಯ ಕರ್ಮಂ ನ ವಿದ್ಯತೆ" ಎಂದು ಗೀತೆಯೇ ಹೇಳಿದುದು. ಯಾರಿಗೆ ದೇಹವು ತಾನೆಂಬ ಅಭಿಮಾನ ಇರುವುದಿಲ್ಲವೋ ಅವರೇ ಕರ್ಮಾತೀತರು ಕರ್ಮಗಳನ್ನು ಬಿಟ್ಟು ಮಿಥ್ಯಾಚಾರಿಗಳಾಗುವುದಕ್ಕಿಂತ ದೇಹ ತಾದಾತ್ಮ್ಯ ಉಳ್ಳ ಮಾನವರು ಕರ್ಮಗಳನ್ನು ಮಾಡುವುದೇ ಒಳ್ಳೆಯದು ಎಂದು ಆ ಉಪದೇಶದ ತಾತ್ಪರ್ಯ. "ಕುರ್ವನ್ನೇವೇಹ ಕರ್ಮಾಣಿ ಜೀವಿಷೇಚ್ಛತಗ್ಂ ಸಮಾಃ" ಎಂದು ಈಶ್ಯಾವಾಶ್ಯ ಶೃತಿ ಜೀವಿತೇಚ್ಛೆ ಉಳ್ಳವರಿಗೆ ಕರ್ಮವನ್ನು ವಿಧಿಸಿರುವುದು ಉಂಟು. ಜೀವಿತೇಚ್ಛೆ ಉಳ್ಳವನೆಂದು ಹೇಳಿರುವುದರಿಂದ ಅವನು ದೇಹತಾದಾತ್ಮ್ಯ ಉಳ್ಳ ಮನುಷ್ಯನೆಂದೇ ಅರ್ಥವಾಗುತ್ತದೆ. ಅಂತಹ ದೇಹತಾದಾತ್ಮ್ಯದಿಂದ ಕೂಡಿ ಮುಕ್ತಿಯನ್ನು ಬಯಸುವ ಸಾಧಕನಿಗೆ ಬೋಧಿಸಿದ ಬೋಧೆಯು ಇದು. ಅವನಿಗೆ ಅಕರ್ಮಕ್ಕಿಂತ ಕರ್ಮವೇ ಶ್ರೇಷ್ಠವು.

ಅಕರ್ಮ ಎಂದರೆ ಸುಮ್ಮನೆ ಕರ್ಮಗಳನ್ನು ಬಿಟ್ಟು ಇರುವುದೆಂದು. ಕೆಲವರು ಭಾವಿಸುತ್ತಾರೆ. ಆತ್ಮದ ಅಕರ್ತಾತ್ಮದ ಸ್ಥಿತಿಯನ್ನು ಅರ್ಥಮಾಡಿಕೊಳ್ಳದವರ ಅಭಿಪ್ರಾಯವು ಇದು. ಆತ್ಮದ ಅಕರ್ತಾತ್ಮ ಸ್ಥಿತಿ ಬೇರೆ.

ದೇಹವನ್ನು ಅಕರ್ಮಣ್ಯ ಸ್ಥಿತಿಯಲ್ಲಿಡುವುದು ಅದು ಬೇರೆ. ಇವು ಎರಡರಲ್ಲಿ ಪ್ರಕಾಶ ಮತ್ತು ಅಂಧಕಾರಕ್ಕೆ ಇರುವ ವ್ಯತ್ಯಾಸವು ಇರುವುದು. ಭಗವದ್ಗೀತೆಗೆ ಆತ್ಮದ ಅಕರ್ತಾತ್ಮದ ಸ್ಥಿತಿಯ ಮೇಲೆ ಮಾನ್ಯತೆ ಇದೆ. ಅಷ್ಟೇ ಹೊರತು ದೇಹದ ಅಕರ್ಮಣ್ಯ ಸ್ಥಿತಿ ಇಷ್ಟವಲ್ಲ. ಅದಕ್ಕೋಸ್ಕರವೇ ಆ ದೃಷ್ಟಿಯನ್ನು ಇಟ್ಟುಕೊಂಡು ಕರ್ಮರಹಿತನಾಗಿ ಇರುವುದಕ್ಕಿಂತ ಕರ್ಮ ಮಾಡುವುದು ಒಳ್ಳೆಯದೆಂದು ಭಗವದ್ಗೀತೆಯು ಪ್ರತಿಪಾದನೆ ಮಾಡಿದೆ

ಅರ್ಜುನನು ಅತ್ತರೆ ಯೋಗವಾಯಿತು ; ಯುದ್ಧ ಮಾಡಿದರೂ ಯೋಗವಾಯಿತು. ಈ ಕೀಲಕವು ಎಲ್ಲಿದೆ ? ಮಾಡುವ ಕರ್ಮದಲ್ಲೇ ನಾವು ಯೋಗವನ್ನು ಹಿಡಿಯಬೇಕಾಗಿದೆ. ಯೋಗವೆಂದರೆ ಮುಕ್ತಿಗೆ ಉಪಾಯ. ಕರ್ಮವನ್ನು ಮಾಡುತ್ತಾ ಮಾಡುತ್ತಾ ಆ ಕರ್ಮವೇ ಯೋಗವಾಗಬೇಕಾಗಿದೆ. ಕರ್ಮವು ಯಾವ ವಿಧದಿಂದ ಯೋಗವಾಗುತ್ತದೆಯೋ ಆ ಉಪಾಯವು ಈ ಅಧ್ಯಾಯದಲ್ಲಿ ಹೇಳಲ್ಪಟ್ಟದೆ

ಮುಂಚೆ ಗ್ರಂಥವನ್ನು ಓದಿರಿ. ಓದಿ ಆ ಉಪಾಯವನ್ನು ಹಿಡಿಯಿರಿ. ಆ ಮೇಲೆ ಅಪಾಯರಹಿತ ಸ್ಥಿತಿಯನ್ನು ಹೊಂದಿರಿ. ತಥಾಸ್ತು.

ಶುಭಂ ಭೂಯಾತ್.

ಇತಿ
**ಶ್ರೀ ಶ್ರೀ ಶ್ರೀ ರಾಮಕೃಷ್ಣಾನಂದಜಿ**
ಅಧ್ಯಕ್ಷರು
ಶ್ರೀಸ್ವಾಮಿಶಂಕರಾನಂದ ವಿಶ್ವಸ್ಥ ಸಮಿತಿ (ರಿ.)
ಶ್ರೀ ಶಿವಾನಂದಾಶ್ರಮ, ಅಜ್ಜಂಪುರ

ಓಂ

# ಮೂರನೆಯ ಪುನರ್ಮುದ್ರಣದ ನಿವೇದನೆ

ಸನಾತನ ಧರ್ಮಿಗಳ ಧರ್ಮಗ್ರಂಥಗಳು ಉಪನಿಷತ್ತುಗಳು, ಶ್ರೀಮದ್ಭಗವದ್ಗೀತೆ, ಮತ್ತು ಬ್ರಹ್ಮಸೂತ್ರ ಇವುಗಳು. ಎಲ್ಲರಿಗೂ ಎಲ್ಲಾ ಉಪನಿಷತ್ತುಗಳೂ ಲಭ್ಯವಿಲ್ಲ. ಆದ್ದರಿಂದ ಗೀತಾಚಾರ್ಯನಾದ ಭಗವಂತನು ಕುರುಕ್ಷೇತ್ರ ರಣರಂಗದಲ್ಲಿ ಮೋಹದಿಂದ ಚಂಚಲಚಿತ್ತನಾಗಿ ಯುದ್ಧರಂಗದಿಂದ ಓಡಿಹೋಗಬೇಕೆಂದು ತೀರ್ಮಾನಿಸಿ ಉನ್ಮಾದದಿಂದ ಬಿಲ್ಲು ಬಾಣಗಳನ್ನು ಬಿಸಾಡಿ ತಿರಿದು ತಿಂದರೂ ಯುದ್ಧ ಮಾಡುವುದಿಲ್ಲವೆಂದು ಹೇಳಿದ ಅರ್ಜುನನಿಗೆ ಭಗವಂತನು ಪ್ರೀತಿಪೂರ್ವಕವಾಗಿ ಪರಮಾತ್ಮ, ಜೀವ, ಜಗತ್ತುಗಳ ರಹಸ್ಯವನ್ನು ಬೋಧಿಸಿದನು. ಆ ಬೋಧನೆಯೇ ಶ್ರೀಮದ್ಭಗವದ್ಗೀತೆ. ಇದು ಎಲ್ಲಾ ಉಪನಿಷತ್ತುಗಳ ಸಾರ ಎಲ್ಲಾ ಉಪನಿಷತ್ತುಗಳೆಂಬ ಹಸುಗಳಿಂದ ಅರ್ಜುನನೆಂಬ ಕರುವನ್ನು ನಿಮಿತ್ತ ಮಾಡಿಕೊಂಡು ಶ್ರೀಕೃಷ್ಣ ಭಗವಂತನು ಕರೆದ ಅಮೃತಧಾರೆಯೇ ಶ್ರೀಮದ್ಭಗವದ್ಗೀತೆ. ಈ ಗೀತಾಮೃತದ ರುಚಿಯನ್ನು ಹಸುವಿನ ಕರುವಿನಂತಿದ್ದ ಅರ್ಜುನನು ಸವಿದನು. ಉಳಿದ ಅಮೃತಧಾರೆಯನ್ನು ವಿವೇಕಿಗಳು ಸವಿಯುವರು.

**ಸರ್ವೋಪನಿಷದೋಗಾವೋ । ದೋಗ್ಧಾ ಗೋಪಾಲನಂದನಃ ।**
**ಪಾರ್ಥೋ ವತ್ಸಃ ಸುಧೀರ್ಭೋಕ್ತಾ । ದುಗ್ಧಂ ಗೀತಾಮೃತಂ ಮಹತ್ ॥**

ಹೀಗೆ ಕುರುಕ್ಷೇತ್ರ ರಣರಂಗದಲ್ಲಿ ಭಗವಂತನು ಅರ್ಜುನನಿಗೆ ಬೋಧಿಸಿದ ಗೀತಾಮೃತದ ಪರಿಣಾಮವಾಗಿ ಅರ್ಜುನನ ಉನ್ಮಾದ ಸ್ಥಿತಿ ಹೋಗಿ ನಿಜಸ್ಥಿತಿಯ ಅರಿವಾಯಿತು ಮತ್ತು ಕರ್ತವ್ಯಪರನಾದನು. ಈ ಗೀತಾಮೃತವನ್ನು ಶ್ರದ್ಧೆ, ಭಕ್ತಿಗಳಿಂದ ಪಾನ ಮಾಡಿದವರಿಗೆಲ್ಲಾ ಉನ್ಮಾದವು ಗುಣವಾಗುವುದು. ಉನ್ಮಾದ ಒಂದು ಮಾನಸಿಕ ರೋಗ. ನಮಗೆ ಉನ್ಮಾದವಿದೆಯೋ ಎಂಬುದನ್ನು ನಾವೇ ತಿಳಿದುಕೊಳ್ಳಲು ಸಾಧ್ಯವಿಲ್ಲ. ಅದಕ್ಕೆ ವೈದ್ಯರ ಅವಶ್ಯಕತೆಯಿದೆ. ಈ ಉನ್ಮಾದದ ವೈದ್ಯರೇ ಶ್ರೋತ್ರಿಯರೂ

ಬ್ರಹ್ಮನಿಷ್ಠರೂ ಆದ ಗುರುಗಳು. ನಮಗೆ ನಮ್ಮ ಜೀವಿತ ಕಾಲದಲ್ಲಿಯೇ ಉನ್ಮಾದವೆಂಬ ಮಾನಸಿಕ ರೋಗವನ್ನು ಬೇರು ಸಹಿತ ಕಿತ್ತುಹಾಕುವಂತಹ ವೈದ್ಯರು ಸಿಕ್ಕಿದ್ದರು. ಅವರೇ ಬ್ರಹ್ಮಲೀನ ಶ್ರೀ ಶ್ರೀ ಶ್ರೀ ಸ್ವಾಮಿ ಶಂಕರಾನಂದಜಿಯವರು. ಅವರು ತಮ್ಮ ಐಂದ್ರಜಾಲಿಕ ಪ್ರವಚನಗಳಿಂದ ಶ್ರವಣ ಮಾಡುವವರನ್ನು ವಶ್ಯಸುಪ್ತಸ್ಥಿತಿಗೆ (hypnotic trance) ಕರೆದೊಯ್ದು ಸುಪ್ತಚಿತ್ತದಲ್ಲಿರುವ ಉನ್ಮಾದಕ್ಕೆ ಕಾರಣವಾದ ಅಜ್ಞಾನವನ್ನು ತೊಲಗಿಸುವ ಇಲಾಜು ಮಾಡುತ್ತಿದ್ದರು ಇದನ್ನೇ ಆಧುನಿಕ ಮಾನಸಿಕ ರೋಗಗಳ ವೈದ್ಯರುಗಳು ವಶ್ಯಸುಪ್ತ ಇಲಾಜು (hypnotic treatment) ಎಂದು ಕರೆಯುವುದು. ಶ್ರೀ ಶ್ರೀ ಶ್ರೀ ಸ್ವಾಮಿ ಶಂಕರಾನಂದಜಿಯವರು ಸಹಸ್ರಾರು ಜನರಿಗೆ ಉನ್ಮಾದವನ್ನು ವಾಸಿಮಾಡಿ ಸ್ವಸ್ವರೂಪದ ಅನುಭವವಾಗುವಂತೆ ಮಾಡಿದರು

ಕುರುಕ್ಷೇತ್ರದಲ್ಲಿ ಭಗವಂತನು ಬೋಧಿಸಿದ ಶ್ರೀಮದ್ಭಗವದ್ಗೀತೆಯನ್ನು ಪುಸ್ತಕ ರೂಪದಲ್ಲಿ ಬರೆದವರು ಶ್ರೀ ವೇದವ್ಯಾಸ ಭಗವಾನರು. ಮಹಾಭಾರತವನ್ನು ಬರೆದವರು ಅವರೇ ! ಅದು ಹೇಗೆ ಸಾಧ್ಯ ಎಂದು ಕೆಲವರು ಕುತರ್ಕ ಮಾಡುತ್ತಾರೆ ಅಂತಹವರಿಗೆ ಪ್ರಕೃತಿ ನಿಯಮಗಳ ಪೂರ್ಣ ಅರಿವಿಲ್ಲ ಈಗಿನ ಆಧುನಿಕ ಮನೋವಿಜ್ಞಾನಿಗಳು ಇಂದ್ರಿಯಾತೀತ ಅನುಭವಗಳನ್ನು (extra sensory perceptions) ಅನೇಕ ಪ್ರಯೋಗಗಳ ನಂತರ ಒಪ್ಪಿಕೊಂಡಿದ್ದಾರೆ. ಶ್ರೀ ಭಗವಾನ್ ವೇದವ್ಯಾಸರಿಗೆ ಇಂದ್ರಿಯಾತೀತ ಅನುಭವಗಳ ಶಕ್ತಿಯಿತ್ತು. ಅಷ್ಟೇ ಅಲ್ಲ, ಬೇರೆಯವರಿಗೂ ಅವರು ಆ ಶಕ್ತಿಯನ್ನು ಕೊಡುವ ಶಕ್ತಿಯಿತ್ತು. ಅವರೇ ಸಂಜಯನಿಗೆ ಆ 'ಇಂದ್ರಿಯಾತೀತ ಅನುಭವದ' ಶಕ್ತಿಯನ್ನು ಕೊಟ್ಟಿದ್ದರು. ಇದು ವೈಜ್ಞಾನಿಕವಾಗಿ ಹೇಗೆ ಸಾಧ್ಯ ಎಂದು ಪ್ರಶ್ನಿಸಬಹುದು. ಅದಕ್ಕೆ ಉತ್ತರವು ಈ ಕೆಳಗಿದೆ.

ಅಮೆರಿಕಾ ದೇಶದಲ್ಲಿ (U. S A.) ಎಡ್ಗರ್ ಕೇಸೀ ಎಂಬ ಒಬ್ಬ ಶ್ರೀಸಾಮಾನ್ಯನಿದ್ದನು. ಅವನು ವಶ್ಯಸುಪ್ತಕ್ಕೆ (hypnotic trance) ಹೋದಾಗ ಅವನಿಗೆ ವಿಶ್ವದ ಯಾವುದೇ ಭಾಗದಲ್ಲಿ ನಡೆಯುತ್ತಿರುವುದನು

ತನ್ನ ಮನಶ್ಚಕ್ಷುವಿನಿಂದ ಕಂಡು ಹೇಳುವ ಶಕ್ತಿ (clairvoyant power) ಬರುತ್ತಿತ್ತು. ಈ ಶಕ್ತಿಯಿಂದ ರೋಗಗಳಿಂದ ನರಳುತ್ತಿರುವವರ ವಿಳಾಸದ ಮೇಲೆಯೇ ಅವರ ಈಗಿನ ಸ್ಥಿತಿ, ಖಾಯಿಲೆಗೆ ಕಾರಣ ಮುಂತಾದು ವೆಲ್ಲವನ್ನು ಹೇಳುತ್ತಿದ್ದರು. ಹಿಂದಿನ ಜನ್ಮಗಳಲ್ಲಿ ಮಾಡಿದ ಕರ್ಮದ ಫಲ ದಿಂದ ಈ ಜನ್ಮದಲ್ಲಿ ಅನುಭವಿಸುತ್ತಿರುವುದನ್ನು ಸಾದೃಶ್ಯ ಮಾಡಿ ತೋರಿಸಿ ದರು. ಮಾಡಿದ್ದುಣ್ಣೋ ಮಹಾರಾಯ ಎಂಬುದನ್ನು ಪದೇ ಪದೇ ಹೇಳಿರು ತ್ತಾರೆ. ವಶ್ಯಸುಪ್ತ ಸ್ಥಿತಿಯಲ್ಲಿದ್ದಾಗ ಅವರಿಗೆ ಈ ವಿಚಾರಗಳು ಹೇಗೆ ತಿಳಿ ಯುವುವೆಂದು ಕೇಳಲಾಯಿತು ಅದಕ್ಕೆ ಅವರು ಕೊಟ್ಟ ಉತ್ತರವಿದು

ಒಂದನೆ ಮೂಲ : ಯಾರ ಬಗ್ಗೆ ಪ್ರಶ್ನೆ ಕೇಳುತ್ತಿದ್ದಾರೋ ಅವರ ಸುಪ್ತ ಚಿತ್ತ (unconscious mind) ಅದರಲ್ಲಿ ಆ ವ್ಯಕ್ತಿಯ ಜನ್ಮ ಜನ್ಮಾಂತರಗಳ ಅನುಭವಗಳೆಲ್ಲ ದಾಖಲಾಗಿವೆ, ಅದರಿಂದ

ಎರಡನೆಯ ಮೂಲ . ಆಕಾಶದ ದಾಖಲೆಗಳು. ಆಕಾಶವೆಂಬುದು ಸಂಸ್ಕೃತ ಪದ ಇದರಲ್ಲಿ ವಿಶ್ವದ ಪ್ರಾರಂಭದಿಂದ ಎಲ್ಲಾ ಬೆಳಕಿನ, ಶಬ್ದದ ಮತ್ತು ಯೋಚನೆಯ ಸ್ಪಂದನಗಳೂ ದಾಖಲಾಗಿವೆ ಇದು ವಿಶ್ವದ ಒಂದು ದೊಡ್ಡ ಛಾಯಾಗ್ರಾಹಕ ಪೆಟ್ಟಿಗೆ (camera) ಇದ್ದಂತೆ. ಇದರಿಂದ ತಾನು ವಿಷಯಗಳನ್ನು ಕಂಡು ಹೇಳುವುದಾಗಿ ತಿಳಿಸಿದರು. ಆ ದೇಶದವರಿಗೆ ಆಕಾಶ ವೆಂಬ ಅಪರಿಚಿತ ಶಬ್ದದ ಕಾಗುಣಿತವನ್ನು ಹೇಳಿದರು.

ಯಾರ ಬಗ್ಗೆಯಾದರೂ ಎಷ್ಟೇ ಪ್ರಶ್ನೆಗಳನ್ನು ಎಷ್ಟೇ ವರ್ಷಗಳಾದ ಮೇಲೆ ಪುನಃ ಕೇಳಿದರೂ ಒಂದೇ ಉತ್ತರ ಬರುತ್ತಿತ್ತು. (ಮೆನಿಮ್ಯಾಂಶೆನ್ಸ್ ಪುಟ 42, 43ನ್ನು ದಯಮಾಡಿ ಓದಿರಿ). ಅವರು ಯಾವ ವಿಧವಾದ ಸಂಭಾ ವನೆಯನ್ನೂ ತೆಗೆದುಕೊಳ್ಳುತ್ತಿರಲಿಲ್ಲ. ಯಾವ ಸ್ವಾರ್ಥವೂ ಇರಲಿಲ್ಲ.

ಶ್ರೀ ಭಗವಾನ್ ವೇದವ್ಯಾಸರಿಗೆ ಈ ರೀತಿಯಾದ ದಿವ್ಯದೃಷ್ಟಿ ಇತ್ತು. ಅವರು ತಮ್ಮ ದಿವ್ಯದೃಷ್ಟಿಯಿಂದ ಆಕಾಶದ ದಾಖಲೆ (akastic records) ನಲ್ಲಿದ್ದಂತ ವಿಚಾರಗಳನ್ನೆಲ್ಲಾ ಗ್ರಂಥೀಕರಿಸಿದ್ದಾರೆ. ಅವೇ

ನಾಲ್ಕು ವೇದಗಳು. ಮಹಾಭಾರತವನ್ನು ಗ್ರಂಥೀಕರಿಸಿದವರು ಅವರೇ! ಅದರ ಒಂದು ಭಾಗವಾಗಿದೆ ಶ್ರೀಮದ್ಭಗವದ್ಗೀತೆ. ಇದು ಪರಮ ಪವಿತ್ರವಾದ ಶಾಸ್ತ್ರ. ಇದನ್ನು ಹೊರ ದೇಶಗಳಲ್ಲಿ ಒಂದೊಂದು ಮುದ್ರಣಕ್ಕೂ ದಶಲಕ್ಷಗಟ್ಟಲೆ ಪ್ರತಿಗಳನ್ನು ಮುದ್ರಿಸುತ್ತಿರುವಷ್ಟು ಜನಪ್ರಿಯವಾಗಿದೆ.

ಈ ಸದ್ಗ್ರಂಥವು ರೂಪ ತಾಳಿದ ಮಹಾನಾಡು ನಮ್ಮದು ಇಲ್ಲಿ ಇದರ ಬಗ್ಗೆ ಶ್ರೀಸಾಮಾನ್ಯನಿಗೆ ತಿಳಿವಳಿಕೆಯಾಗಿ ತನ್ಮೂಲಕ ಜೀವನ ಸಾರ್ಥಕ ಮಾಡಿಕೊಳ್ಳಲೆಂಬ ದೊಡ್ಡ ಉದ್ದೇಶದಿಂದ ಬ್ರಹ್ಮಲೀನ ಶ್ರೀ ಶ್ರೀ ಶ್ರೀ ಸ್ವಾಮಿ ಶಂಕರಾನಂದಜಿಯವರು ಆಂಧ್ರ ಮತ್ತು ಕರ್ನಾಟಕ ಪ್ರಾಂತ್ಯಗಳಲ್ಲಿ ಪ್ರವಚನಗಳನ್ನು ಮಾಡಿದ್ದನ್ನು ತಾವೇ ಗ್ರಂಥರೂಪದಲ್ಲಿ ಒಂದೊಂದು ಅಧ್ಯಾಯಕ್ಕೆ ಒಂದೊಂದು ಪುಸ್ತಕವನ್ನು ಪ್ರಕಟಿಸಿದರು ಪುಸ್ತಕಗಳು ಮುಗಿದಂತೆಲ್ಲಾ ಪುನರ್ಮುದ್ರಣ ಮಾಡಿಸುವ ಸೇವೆಯನ್ನು ವಿಶ್ವಸ್ಥ ಸಮಿತಿಯು ಮಾಡುತ್ತಿದೆ.

ಈ ಪುನರ್ಮುದ್ರಣಕ್ಕೆ ಪ್ರೇಮಪೂರ್ವಕವಾಗಿ ತಮ್ಮ ನಿವೃತ್ತಿ ವೇತನದಿಂದ ಧನ ಸಹಾಯ ಮಾಡಿದ ಶ್ರೀ ಸಾಧು ಪ್ರೇಮದಾಸಜಿಯವರಿಗೆ ಅನೇಕ ಕೃತಜ್ಞತಾಪೂರ್ವಕವಾದ ವಂದನೆಗಳು

ಈ ಸದ್ಗ್ರಂಥವನ್ನು ಓದಿ, ಮನನ ಮಾಡಿ, ಅನುಷ್ಠಾನ ಮಾಡಿ ಅಸಂಗತ್ವವೆಂಬ ಮಾನಸಿಕ ಸ್ಥಿತಿಯನ್ನು ಪಡೆಯುವುದರ ಮೂಲಕ ಕರ್ಮ–ಫಲ – ಭೋಗ – ವಾಸನೆ – ಜನ್ಮ – ಕರ್ಮ ಎಂಬ ಚಕ್ರದಿಂದ ಬಿಡುಗಡೆ ಪಡೆಯುವುದರಿಂದ ಕೈವಲ್ಯವನ್ನು ಪಡೆಯಬೇಕೆಂದು ವಿನಮ್ರ ನಿವೇದನೆ.

ಈ ಸದ್ಗ್ರಂಥವನ್ನು ಅಚ್ಚುಕಟ್ಟಾಗಿ ಶ್ರದ್ಧೆಯಿಂದ ಮುದ್ರಿಸಿಕೊಟ್ಟ ಕೂರ್ಗ್ ಪ್ರಿಂಟಿಂಗ್ ಪ್ರೆಸ್ ಮಾಲೀಕರಾದ ಶ್ರೀ ಕೆ. ಬಿ. ಚಂಗಪ್ಪನವರಿಗೆ

ಅನಂತ ಧನ್ಯವಾದಗಳು   ಪರಮಾತ್ಮನು ಅವರಿಗೆ ಸನ್ಮಂಗಳಗಳನ್ನು ಉಂಟು ಮಾಡಲೆಂದು ಪ್ರಾರ್ಥಿಸುತ್ತೇವೆ.

ಇತಿ ಶ್ರೀ ಸ್ವಾಮಿ ಶಂಕರಾನಂದರ
ಪಾದರೇಣು
**ಟಿ. ರಾಮಯ್ಯ**
ಪ್ರಧಾನ ಕಾರ್ಯದರ್ಶಿ
ಶ್ರೀ ಸ್ವಾಮಿ ಶಂಕರಾನಂದ ವಿಶ್ವಸ್ಥ ಸಮಿತಿ (ರಿ
ಶ್ರೀಶಿವಾನಂದಾಶ್ರಮ, ಅಜ್ಜಂಪುರ
ಹಾಗೂ
ನಿವೃತ್ತ ಸಹ ನಿರ್ದೇಶಕ,
ಸಾರ್ವಜನಿಕ ಶಿಕ್ಷಣ ಇಲಾಖೆ,
ಕರ್ನಾಟಕ ಸರ್ಕಾರ.



**ಪೂಜ್ಯಪಾದ ಶ್ರೀ ಶಿವಾನಂದಜೀಯವರು**

(ಶ್ರೀ ಶ್ರೀ ಶ್ರೀ ಶಂಕರಾನಂದ ಸ್ವಾಮಿಜಿಯವರ ಕರಕಮಲ ಸಂಜಾತರು)



ಶ್ರೀ ಶ್ರೀ ಶ್ರೀ ರಾಮಕೃಷ್ಣಾನಂದಜಿ

ದಾನಿಗಳು



ಶ್ರೀ ಸಾಧು ಪ್ರೇಮದಾಸ್‌ಜಿ ಗುನಾತಿಯವರು

## ಮೂರನೇ ಅಧ್ಯಾಯ

# ಗೀತೋಕ್ತ ಕರ್ಮಯೋಗ

ಆತ್ಮೀಯರೇ !

ನಿಮ್ಮೆಲ್ಲರ ಶುದ್ಧವಾದ ಬುದ್ಧಿಯಲ್ಲಿ, ಪವಿತ್ರವಾದ ಅಂತಃಕರಣದಲ್ಲಿ ಸಾಕ್ಷಿರೂಪದಿಂದ ಪ್ರಕಾಶಿತವಾದ ಪರಬ್ರಹ್ಮಕ್ಕೆ ಅನೇಕ ನಮಸ್ಕಾರ.

ಗ್ರಂಥಾರಂಭಕ್ಕಿಂತ ಮೊದಲು ಸರ್ವರ ಆತ್ಮರೂಪದಿಂದಿರುವ ಪರಮಾತ್ಮನಿಗೆ ನಮಸ್ಕಾರ ಮಾಡಿ, ಗುರುಪರಂಪರೆಯನ್ನು ಸ್ಮರಿಸಿ, ಬ್ರಹ್ಮವಿದ್ಯಾ ಸಂಪ್ರದಾಯ ಕರ್ತರಾದ ಮಹರ್ಷಿಗಳಿಗೆ ಶ್ರದ್ಧಾಂಜಲಿಯನ್ನು ಸಮರ್ಪಿಸಿ ಆರಂಭಿಸೋಣ.

೧. ಅರ್ಜುನ ವಿಷಾದಯೋಗ, ೨ ಸಾಂಖ್ಯಯೋಗ, ೩. ಜ್ಞಾನಯೋಗ, ೪. ವಿಜ್ಞಾನಯೋಗ, ೫. ಅಕ್ಷರ ಪರಬ್ರಹ್ಮಯೋಗ, ೬ ರಾಜ ವಿದ್ಯಾ ರಾಜ ಗುಹ್ಯಯೋಗ, ೭. ಭಕ್ತಿಯೋಗ, ೮. ಕ್ಷೇತ್ರ ಕ್ಷೇತ್ರಜ್ಞ ವಿಭಾಗ ಯೋಗ, ೯. ಗುಣತ್ರಯ ವಿಭಾಗಯೋಗ ಮತ್ತು ೧೦. ಪುರುಷೋತ್ತಮ ಪ್ರಾಪ್ತಿಯೋಗ – ಈ ೧೦ ಅಧ್ಯಾಯಗಳ ಉಪನ್ಯಾಸವನ್ನು ಓದಿದ ಪಾಠಕರು ಕರ್ಮಯೋಗವನ್ನು ಓದಬೇಕೆಂದು ಬಯಸುವಿರಲ್ಲವೆ? ಹಾಗಾದರೆ ಬನ್ನಿ, ಈ ಕರ್ಮಯೋಗವನ್ನು ಪಠಿಸಿ ಆಚರಿಸಿ, ಇದರಿಂದ ಚಿತ್ತಶುದ್ಧಿ ದ್ವಾರ ಜ್ಞಾನವನ್ನು ಪಡೆದು ಬ್ರಹ್ಮಾತ್ಮದ ಏಕತೆಯ ಆನಂದವನ್ನು ಅನುಭವಿಸಿರಿ.

### ಕರ್ಮಯೋಗದ ವಿಶೇಷ ಮಹತ್ವ

ಕರ್ಮಯೋಗದ ರಹಸ್ಯವು ಭಗವದ್ಗೀತೆಯಲ್ಲಿ ಸುಸ್ಪಷ್ಟವಾಗಿಯೂ, ಸುಲಭವಾಗಿಯೂ ಪ್ರತಿಪಾದಿಸಲ್ಪಟ್ಟಿರುವಂತೆ ಮತ್ತಾವ ಗ್ರಂಥದಲ್ಲಿಯೂ ತೋರಿಬರುವುದಿಲ್ಲ. ಕರ್ಮಯೋಗವು ಭಗವದ್ಗೀತೆಗೆ ಮೀಸಲು ಎಂದು ಧಾರಾಳವಾಗಿ ಹೇಳಬಹುದು.

ಶ್ರೀ ಲೋಕಮಾನ್ಯ ಬಾಲಗಂಗಾಧರ ತಿಲಕ ಮಹಾಶಯರು "ಕರ್ಮಯೋಗ ರಹಸ್ಯ" ಎಂಬ ಹೆಸರಿನಿಂದ ಭಗವದ್ಗೀತೆಯ ಮೇಲೆ ಒಂದು

ವ್ಯಾಖ್ಯಾನವನ್ನು ಬರೆದಿರುತ್ತಾರೆ. ಭಗವದ್ಗೀತೆಯ ಪ್ರಧಾನ ಸಿದ್ಧಾಂತವು ಕರ್ಮಯೋಗವೆಂದೇ ಅವರ ಅಭಿಪ್ರಾಯ

ಕರ್ಮಗಳು ಬಂಧಕ್ಕೂ, ಮೋಕ್ಷಕ್ಕೂ ಕಾರಣಗಳು. ಆಸಕ್ತಿಯಿಂದ ಮಾಡಿದ ಕರ್ಮಗಳು ಬಂಧಕ್ಕೆ ಕಾರಣಗಳು. ಅನಾಸಕ್ತಿಯಿಂದ ಮಾಡಿದ ಕರ್ಮಗಳು ಮೋಕ್ಷಕ್ಕೆ ಕಾರಣಗಳು ಈ ಎರಡೂ ವಿಧಾನಗಳನ್ನು ಭಗವದ್ಗೀತೆಯು ಪ್ರತಿಪಾದಿಸಿದೆ. ಬೀಗದ ಕೈಯನ್ನು ಎಡಕ್ಕೆ ತಿರುಗಿಸಿದರೆ ಬೀಗವು ಬೀಳುತ್ತದೆ ಬಲಕ್ಕೆ ತಿರುಗಿಸಿದರೆ ಬೀಗವು ಬಿಡುತ್ತದೆ ತಿರುಗಿಸುವುದರಲ್ಲಿಯೇ ವ್ಯತ್ಯಾಸ. ಕರ್ಮಗಳೂ ಹೀಗೆಯೇ. ಕರ್ತೃತ್ವ ಬುದ್ಧಿಯೆಂಬ ಆಸಕ್ತಿಯಿಂದ ಮಾಡಿದರೆ ಬಂಧಕರವಾಗುತ್ತವೆ ಅಕರ್ತೃತ್ವ ಬುದ್ಧಿಯೆಂಬ ಅನಾಸಕ್ತಿಯಿಂದ ಮಾಡಿದರೆ ಮೋಕ್ಷದಾಯಕವಾಗುತ್ತದೆ.

ಕರ್ಮದಿಂದ ಫಲ, ಫಲದಿಂದ ಭೋಗ, ಭೋಗದಿಂದ ವಾಸನೆ, ವಾಸನೆಯಿಂದ ಜನ್ಮ, ಜನ್ಮದಿಂದ ಪುನಃ ಕರ್ಮ – ಈ ರೀತಿ ಕರ್ಮ–ಫಲ–ಭೋಗ–ವಾಸನೆ–ಜನ್ಮ ಎಂಬ ಸಂಕೋಲೆಯು ಉಂಟಾಗುತ್ತದೆ ಈ ವಿಧವಾಗಿ ಕರ್ಮಗಳು ಜನ್ಮಬಂಧಕ್ಕೆ ಕಾರಣವಾಗುತ್ತವೆ ಕರ್ಮ ವಾಸನೆಗಳೇ ಜನ್ಮಬಂಧಕ್ಕೆ ಕಾರಣಗಳಲ್ಲದೆ ಕೇವಲ ಕರ್ಮಗಳಲ್ಲ ಆಸಕ್ತಿಯಿಂದ, ಕರ್ತೃತ್ವ ಬುದ್ಧಿಯಿಂದ ಮಾಡಿದ ಕರ್ಮಗಳೇ ವಾಸನೆಗಳನ್ನುಂಟುಮಾಡುತ್ತವೆ, ಅನಾಸಕ್ತಿಯಿಂದ ಮಾಡಿದ ಕರ್ಮಗಳು ವಾಸನೆಗಳಿಗೆ ಕಾರಣಗಳಾಗಲಾರವು. ಹೇಗೆಂದರೆ, ಕಾಫಿಯನ್ನು ಕುಡಿಯುವಾಗ ಆಸಕ್ತಿಯಿಂದ ಕುಡಿಯುವುದರಿಂದ ಆ ಸಂಸ್ಕಾರವು ಹೃದಯದಲ್ಲಿ ಮೂಡಿ, ಮತ್ತೆ ಕುಡಿಯಬೇಕೆಂಬ ವಾಸನೆ ಉಂಟಾಗುತ್ತದೆ. ಮತ್ತೊಂದು ವಿಷಯ · ಜ್ವರ ಬಂದಾಗ ಕೊಯಿನಾ ಮಿಕ್ಸ್ಚರ್ ಕುಡಿಯುತ್ತೇವೆ. ಅದರಲ್ಲಿ ಆಸಕ್ತಿಯಿಲ್ಲ, ಅನಿವಾರ್ಯವಾಗಿ ಕುಡಿಯಲೇಬೇಕೆಂದು ಕುಡಿಯುತ್ತೇವೆ. ಆದುದರಿಂದ ಸಂಸ್ಕಾರವು ಅಂಟುವುದಿಲ್ಲ. ಮತ್ತೆ ಕುಡಿಯಬೇಕೆಂಬ ವಾಸನೆ ಇರುವುದಿಲ್ಲ. ಇದೇ ಭಗವದ್ಗೀತೆಯ ಕರ್ಮಯೋಗವೆಂಬ ದಾರಿ.

ಕರ್ಮಗಳನ್ನೇನೋ ಅನಿವಾರ್ಯವಾಗಿ ಮಾಡಲೇಬೇಕು. ಕರ್ಮ ಬಿಟ್ಟು ಒಂದು ಕ್ಷಣವೂ ಇರಲಾಗುವುದಿಲ್ಲ. ಮಾಡಿದರೆ ಅವು ಬಂಧವನ್ನುಂಟು ಮಾಡುತ್ತವೆ. ಈ ಸಮಸ್ಯೆಗೆ ಪರಿಹಾರ ಮಾರ್ಗ ಯಾವುದು ? ಕರ್ಮ

ಗಳನ್ನು ಮಾಡುತ್ತಾ ಅವು ಬಂಧಕರಗಳಾಗಕೂಡದು. ಈ ಯುಕ್ತಿಯನ್ನು ಭಗವದ್ಗೀತೆಯು ಬೋಧಿಸಿದೆ ಈ ಯುಕ್ತಿಗೆ ಯೋಗವೆಂದು ಹೆಸರು.

"ಯೋಗಃ ಕರ್ಮಸು ಕೌಶಲಂ"

ಕರ್ಮಗಳನ್ನು ಮಾಡುತ್ತಾ ಅವು ಬಂಧಕ್ಕೆ ಕಾರಣವಾಗಬಾರದು; ಇದೇ ಯೋಗ, ಅಂದರೆ ಉಪಾಯ ಕರ್ಮಯೋಗವೆಂದರೂ, ಮಹಾತ್ಮ ಗಾಂಧಿಯವರ ಅನಾಸಕ್ತಿ ಯೋಗವೆಂದರೂ ಒಂದೇ

"ತಸ್ಮಾದ ಸಕ್ತಃ ಸತತಂ
ಕಾರ್ಯಂ ಕರ್ಮ ಸಮಾಚರ"

ಸಂಬಂಧ · ಎರಡನೆ ಅಧ್ಯಾಯದಲ್ಲಿ ಭಗವಂತನು "ಅಶೋಚ್ಯಾನನ್ವ ಶೋಚಸ್ತ್ವಂ" (೨ ೧೧) ರಿಂದ ಹಿಡಿದು "ದೇಹೀ ನಿತ್ಯಮವಧ್ಯೋಽಯಂ" (೨ ೩೦) ರವರೆಗೆ ಆತ್ಮ ತತ್ವವನ್ನು ನಿರೂಪಿಸುತ್ತಾ ಸಾಂಖ್ಯ ಯೋಗವನ್ನು ಪ್ರತಿಪಾದಿಸಿರುತ್ತಾನೆ ಮತ್ತು "ಬುದ್ಧಿಯೋಗೇತ್ವಿಮಾಂಶೃಣು" (೨ ೩೯) ರಿಂದ ಹಿಡಿದು "ತದಾಯೋಗಮವಾಪ್ಸ್ಯಸಿ" (೨ ೫೩)ರವರೆಗೆ ಸಮಬುದ್ಧಿ ರೂಪ ಕರ್ಮಯೋಗವನ್ನು ವರ್ಣಿಸಿರುತ್ತಾನೆ ಇದಾದನಂತರ ೫೪ನೇ ಶ್ಲೋಕ ದಿಂದ ಅಧ್ಯಾಯದ ಸಮಾಪ್ತಿವರೆವಿಗೆ ಅರ್ಜುನನ ಪ್ರಶ್ನೆಗೆ ಪ್ರೇರೇಪಿತನಾಗಿ ಭಗ ವಂತನು ಸಮಬುದ್ಧಿರೂಪ ಕರ್ಮಯೋಗ ದ್ವಾರಾ ಪರಮೇಶ್ವರನನ್ನು ಪ್ರಾಪ್ತ ಮಾಡಿಕೊಂಡ ಸ್ಥಿತಪ್ರಜ್ಞನೆಂಬ ಸಿದ್ಧಪುರುಷನ ಲಕ್ಷಣ, ಆಚರಣ ಮತ್ತು ಮಹತ್ವವನ್ನು ಪ್ರತಿಪಾದಿಸಿದ್ದಾನೆ ಅಲ್ಲಿ ಕರ್ಮಯೋಗದ ಮಹಿಮೆಯನ್ನು ಹೇಳುತ್ತಾ ಭಗವಂತನು ೪೭ನೇ ಮತ್ತು ೪೮ನೇ ಶ್ಲೋಕಗಳಲ್ಲಿ ಕರ್ಮಯೋಗದ ಸ್ವರೂಪವನ್ನು ಪ್ರತಿಪಾದಿಸಿ ಅರ್ಜುನನನ್ನು ಕುರಿತು ಕರ್ಮಯೋಗವನ್ನು ಆಚರಿಸಲೆಂದು ಹೇಳಿದನು. ೪೯ನೇ ಶ್ಲೋಕದಲ್ಲಿ ಸಮಬುದ್ಧಿರೂಪ ಕರ್ಮ ಯೋಗಕ್ಕಿಂತ ಸಕಾಮ ಕರ್ಮದ ಸ್ಥಾನವು ಅತಿ ನೀಚವೆಂದು ಹೇಳಿದ್ದಾನೆ. ೫೦ ನೆಯ ಶ್ಲೋಕದಲ್ಲಿ ಸಮಬುದ್ಧಿಯುಳ್ಳ ಪುರುಷನನ್ನು ಪ್ರಶಂಸಿಸುತ್ತಾ ಅರ್ಜುನನನ್ನು ಕುರಿತು ಕರ್ಮಯೋಗವನ್ನು ಆಚರಿಸೆಂದು ಬೋಧಿಸಿದ್ದಾನೆ. ೫೧ನೇ ಶ್ಲೋಕದಲ್ಲಿ ಸಮಬುದ್ಧಿಯಿಂದ ಕೂಡಿದ ಜ್ಞಾನಿ ಪುರುಷನಿಗೆ ಅನಾ ಮಯಪದವು ಪ್ರಾಪ್ತಿಯಾಗುವುದೆಂದು ತೋರಿಸಿದನು. ಈ ಪ್ರಸಂಗವನ್ನು ಕೇಳಿ ಅರ್ಜುನನು ಬೋಧೆಯ ಯಥಾರ್ಥ ಅಭಿಪ್ರಾಯವನ್ನು ನಿಶ್ಚಯ ಮಾಡ

ಲಾರದವನಾಗಿ ಅವನು "ಬುದ್ಧಿ"ಯೆಂಬ ಪದದ ಅರ್ಥವನ್ನು "ಜ್ಞಾನ"ವೆಂದು ತಿಳಿದುಕೊಂಡದ್ದರಿಂದ ಅವನಿಗೆ ಭ್ರಮೆಯುಂಟಾಯಿತು ಅವನಿಗೆ ಭಗವಂತನ ವಚನದಿಂದ "ಕರ್ಮ"ಕ್ಕಿಂತ "ಜ್ಞಾನ"ವೇ ಶ್ರೇಷ್ಠವೆಂದು ತೋರಿತು ಈ ಎರಡೂ ವಚನಗಳ ತಾತ್ಪರ್ಯವು ಸ್ಪಷ್ಟವಾಗಿ ತೋರದೆ ಎರಡೂ ಕೂಡಿದಂತೆ ತೋರಿತು "ಅತಏವ" ಭಗವಂತನಿಂದಲೇ ಅವುಗಳ ಸ್ಪಷ್ಟೀಕರಣ ಮಾಡಿಸಿ ಕೊಳ್ಳುವುದಕ್ಕಾಗಿಯೂ, ನಿಶ್ಚಿತ ಶ್ರೇಯಃ ಸಾಧನವನ್ನು ತಿಳಿದುಕೊಳ್ಳುವ ಇಚ್ಛೆಯಿಂದಲೂ ಅವನು ಹೀಗೆ ಕೇಳುತ್ತಾನೆ –

ಅರ್ಜುನ ಉವಾಚಃ

**ಜ್ಯಾಯಸೀ ಚೇತ್ ಕರ್ಮಣಸ್ತೇ । ಮತಾ ಬುದ್ಧಿರ್ಜನಾರ್ದನ**
**ತತ್ಕಿಂ ಕರ್ಮಣಿ ಘೋರೇ ಮಾಂ । ನಿಯೋಜಯಸಿ ಕೇಶವ ॥೧॥**

ತಾತ್ಪರ್ಯ : ಹುಟ್ಟು ಸಾವುಗಳನ್ನು ಕಳೆಯುವವನೇ, ಸರ್ವೇಶ್ವರನಾದ ಶ್ರೀಕೃಷ್ಣನೇ, ಕೇಳು ನಿನಗೆ ಕರ್ಮಕ್ಕಿಂತಲೂ ಜ್ಞಾನವು ಹೆಚ್ಚಿನದೆಂಬ ಅಭಿಪ್ರಾಯವಿದ್ದರೆ ಅದೇಕೆ ನನ್ನನ್ನು ಅನೇಕ ಹಾನಿಯನ್ನುಂಟುಮಾಡುವ ಕರ್ಮದಲ್ಲಿ ತೊಡಗಿಸುತ್ತಿ ?

## ವಿವರಣೆ

ಪ್ರಶ್ನೆ · ಕರ್ಮಕ್ಕಿಂತ ಜ್ಞಾನವು ಶ್ರೇಷ್ಠ ಎಂದು ಇದಕ್ಕಿಂತ ಪೂರ್ವದಲ್ಲಿ ಎಲ್ಲಿ ಹೇಳಿದೆ ? ಹೇಳದೆ ಇದ್ದ ಪಕ್ಷದಲ್ಲಿ ಅರ್ಜುನನ ಪ್ರಶ್ನೆಗೆ ಆಧಾರವೇನು ?

ಉತ್ತರ . ಹಿಂದೆ ಎಲ್ಲಿಯೂ ಹೇಳಿಲ್ಲ. ಕಿಂತು ಅರ್ಜುನನು ಶ್ರೀಕೃಷ್ಣನ ಬೋಧೆಯ ಮರ್ಮವನ್ನು ತಿಳಿಯದೆ "ದೂರೇಣಹ್ಯವರಂ ಕರ್ಮಬುದ್ಧಿಯೋಗಾದ್ಧನಂಜಯ" ಎಂಬ ವಾಕ್ಯದಿಂದ ಶ್ರೀಕೃಷ್ಣನು "ಬುದ್ಧಿಯೋಗ" ಎಂಬ ಪದದಿಂದ ಜ್ಞಾನವನ್ನು ಹೇಳುತ್ತಾನೆಂತಲೂ ಮತ್ತು ಆ ಜ್ಞಾನಕ್ಕಿಂತ ಕರ್ಮವು ಅತ್ಯಂತ ಕೀಳಾದದ್ದೆಂದು ಹೇಳುತ್ತಾನೆಂದೂ ಭಾವಿಸಿದನು. ವಸ್ತುತಃ ಅಲ್ಲಿ "ಬುದ್ಧಿಯೋಗ"ಎಂಬ ಪದಕ್ಕೆ ಜ್ಞಾನವೆಂದು ಅರ್ಥವಲ್ಲ ಅಲ್ಲಿ "ಬುದ್ಧಿಯೋಗ" ಎಂಬ ಪದಕ್ಕೆ ಸಮಬುದ್ಧಿಯಿಂದಾಗುವ "ಕರ್ಮಯೋಗ" ವೆಂದರ್ಥ. ಮತ್ತು

ಅಲ್ಲಿಯ "ಕರ್ಮ" ಎಂಬ ಪದಕ್ಕೆ ಸಕಾಮ ಕರ್ಮವೆಂದರ್ಥ ಯಾಕೆಂದರೆ ಅದೇ ಶ್ಲೋಕದಲ್ಲಿ ಶ್ರೀಕೃಷ್ಣನು ಫಲವನ್ನು ಬಯಸುವವನನ್ನು ಕುರಿತು "ಕೃಪಣಾಃ ಫಲಹೇತವಃ" ಎಂದು ಅವನು ಅತ್ಯಂತ ದೀನನೆಂದು ಹೇಳಿದ್ದಾನೆ. ಮತ್ತು ಆ ಸಕಾಮ ಕರ್ಮಗಳನ್ನು ತುಚ್ಛವೆಂದು ಹೇಳಿ "ಬುದ್ಧೌ ಶರಣ ಮನ್ವಿಚ್ಛ" ಎಂಬುವುದರಿಂದ ಸಮಬುದ್ಧಿ ರೂಪ ಕರ್ಮಯೋಗದ ಆಶ್ರಯವನ್ನು ಗ್ರಹಿಸಲು ಆದೇಶಿಸಿರುತ್ತಾನೆ. ಪರಂತು ಅರ್ಜುನನು ಆ ತತ್ವವನ್ನು ತಿಳಿಯದೆ ಅವನ ಮನಸ್ಸಿನಲ್ಲಿ ಮೇಲಿನ ಪ್ರಶ್ನೆಯು ಉದ್ಭವಿಸಿತು

ಶಂಕಾ : "ಬುದ್ಧಿ" ಶಬ್ದಕ್ಕೆ ಇಲ್ಲಿಯೂ ಹಿಂದಿನಂತೆ ಸಮಬುದ್ಧಿ ರೂಪ ಕರ್ಮಯೋಗವೆಂದು ಏಕ ಭಾವಿಸಬಾರದು ?

ಸಮಾಧಾನ : ಇಲ್ಲಿ ಇರುವುದು ಅರ್ಜುನನ ಪ್ರಶ್ನೆ ಅರ್ಜುನನು ಶ್ರೀ ಕೃಷ್ಣನ ಯಥಾರ್ಥ ತಾತ್ಪರ್ಯವನ್ನು ತಿಳಿಯದೆ "ಬುದ್ಧಿ" ಶಬ್ದಕ್ಕೆ "ಜ್ಞಾನ" ಎಂದು ಅರ್ಥಮಾಡಿಕೊಂಡಿರುತ್ತಾನೆ ಈ ಕಾರಣದಿಂದಲೇ ಅವನು ಉಪ ಯುಕ್ತ ಪ್ರಶ್ನೆಯನ್ನು ಮಾಡಿರುತ್ತಾನೆ. ಒಂದುಪಕ್ಷ ಅರ್ಜುನನು ಬುದ್ಧಿ ಎಂಬ ಪದಕ್ಕೆ ಸಮಬುದ್ಧಿ ರೂಪ ಕರ್ಮಯೋಗವೆಂದು ತಿಳಿದಿದ್ದರೆ ಈ ಪ್ರಕಾರ ಪ್ರಶ್ನೆಗೆ ಆಧಾರವೇ ಇರುತ್ತಿರಲಿಲ್ಲ. ಅರ್ಜುನನು "ಬುದ್ಧಿ" ಎಂಬ ಪದಕ್ಕೆ "ಜ್ಞಾನ" ವೆಂಬ ಅರ್ಥವನ್ನು ಮಾಡಿಕೊಂಡದ್ದರಿಂದ ಇಲ್ಲಿ ಅರ್ಜುನನ ಅಭಿಪ್ರಾಯಕ್ಕೆ ಅನುಸಾರವಾಗಿ "ಬುದ್ಧಿ" ಪದಕ್ಕೆ "ಜ್ಞಾನ"ವೆಂದು ಹೇಳಬೇಕಾಯಿತು.

ಶಂಕಾ : ನನ್ನನ್ನು ಘೋರ ಕರ್ಮದಲ್ಲಿ ಏಕೆ ತೊಡಗಿಸುವೆ ? ಎಂಬ ವಾಕ್ಯದ ಭಾವವೇನು ?

ಸಮಾಧಾನ : ಶ್ರೀಕೃಷ್ಣನ ವಾಸ್ತವಿಕ ಅಭಿಪ್ರಾಯವನ್ನು ತಿಳಿಯದೆ ಅರ್ಜುನನು, ಯಾವ ಕರ್ಮವನ್ನು ಶ್ರೀಕೃಷ್ಣನು ಅತ್ಯಂತ ತುಚ್ಛವೆಂದು ಹೇಳು ತ್ತಾನೋ ಅದೇ ಕರ್ಮದಲ್ಲಿ ನನ್ನನ್ನು "ತಸ್ಮಾದ್ಯುಧ್ಯಸ್ವ ಭಾರತ" ಈ ಕಾರಣ ದಿಂದ ಯುದ್ಧ ಮಾಡು; ಮತ್ತು "ಕರ್ಮಣ್ಯೇ ವಾಧಿಕಾರಸ್ತೆ" ನಿನಗೆ ಕರ್ಮ ದಲ್ಲಿಯೇ ಅಧಿಕಾರ, ಇನ್ನು "ಯೋಗಸ್ಥಃ ಕುರುಕರ್ಮಾಣಿ" ಅಂದರೆ ಯೋಗದಲ್ಲಿದ್ದು ಕರ್ಮವನ್ನು ಮಾಡು – ಇತ್ಯಾದಿ ವಾಕ್ಯಗಳಿಂದ ನನ್ನನ್ನು ಕರ್ಮದಲ್ಲಿ ಪ್ರವೃತ್ತಿ ಮಾಡುತ್ತಾನೆ ಇದರಿಂದ ಉಪಯುಕ್ತ ವಾಕ್ಯಗಳಿಂದ ನನ್ನನ್ನು ಘೋರಕರ್ಮ – ಅಂದರೆ ಪಾಪರೂಪ ಯುದ್ಧ ಕರ್ಮದಲ್ಲಿ ಏಕೆ ತೊಡಗಿಸುವೆ ಎಂದು ಕೇಳುತ್ತಾನೆ.

ಪ್ರಶ್ನೆ. 'ಜನಾರ್ದನ' ಎಂಬ ಪದಕ್ಕೆ ಅರ್ಥವೇನು ?

ಉತ್ತರ: 'ಜನಾರ್ದನ' ಎಂಬ ಪದಕ್ಕೆ ಎರಡು ಅರ್ಥ

೧. "ಸರ್ವೈರ್ಜನೈರರ್ದ್ಯತೆ ಯಾಚ್ಯತೆ ಸ್ವಾಭಿಲಷಿತ ಸಿದ್ಧಯೇ ಇತಿ ಜನಾರ್ದನಃ"

ಅರ್ಥ: ಸರ್ವರೂ ತಮ್ಮ ಮನೋರಥ ಸಿದ್ಧಿಗಾಗಿ ಯಾರನ್ನು ಯಾಚಿಸುವರೋ ಅವನು ಜನಾರ್ದನ.

೨ "ಜನಂ ಜನನಂ ತತ್ಕಾರಣ ಮಜ್ಞಾನಂಚ ಸ್ವಸಾಕ್ಷಾತ್ಕಾರೇಣಾರ್ದಯತಿ ಹಿನಸ್ತೀತಿ ಜನಾರ್ದನ"

ಅರ್ಥ: ಜನನ ಮರಣಕ್ಕೆ ಕಾರಣವಾದ ಅಜ್ಞಾನವು ಯಾವನ ಸಾಕ್ಷಾತ್ಕಾರದಿಂದ ನಾಶವಾಗುವುದೋ ಅವನು ಜನಾರ್ದನ.

ಪ್ರಶ್ನೆ. 'ಕೇಶವ' ಎಂಬ ಪದಕ್ಕೆ ಅರ್ಥವೇನು ?

ಉತ್ತರ: 'ಕ' ಎಂದರೆ ಬ್ರಹ್ಮ, 'ಅ' ಎಂದರೆ ವಿಷ್ಣು ಮತ್ತು 'ಈಶ' ಅಂದರೆ ಮಹೇಶ ಈ ಮೂರೂ ಯಾವನಿಗೆ 'ವ' ಅಂದರೆ ಸ್ವರೂಪವೋ ಅವನು ಕೇಶವ.

ಪ್ರಶ್ನೆ: ಶ್ರೀಕೃಷ್ಣನನ್ನು ಅರ್ಜುನನು ಈ ಹೆಸರುಗಳಿಂದ ಸಂಬೋಧಿಸುವ ಉದ್ದೇಶವೇನು ?

ಉತ್ತರ: "ನಾನು ನಿನಗೆ ಶರಣಾಗತನು; ನನ್ನ ಕರ್ತವ್ಯವೇನು? ಬೋಧಿಸು" ಎಂದು ೨.೭ರಲ್ಲಿ ಬೇಡಿಕೊಂಡಿರುತ್ತೇನೆ ಇಲ್ಲಿಯೂ ತಾವು ಸಾಕ್ಷಾತ್ ಪರಮೇಶ್ವರ ಸ್ವರೂಪರು, ನಿಮ್ಮನ್ನು ಯಾಚಿಸುವವನಿಗೆ ನಿಶ್ಚಿತ ಸಿದ್ಧಾಂತವನ್ನು ಬೋಧಿಸಿರಿ – ಎಂಬುದು ಉದ್ದೇಶ.

**ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥ ೨ ॥**

ತಾತ್ಪರ್ಯ. ನೀನು ತಪ್ಪು ತಿಳುವಳಿಕೆಯೆಲ್ಲಾ ಹೋಗುವಂತೆ ಸ್ಪಷ್ಟವಾಗಿಯೇ ಹೇಳುವವನಾದರೂ ಈಗ ಎರಡರ್ಥಗಳನ್ನು ಕೊಡುವ ಮಾತಿನಿಂದ ನನ್ನ ಅಂತಃಕರಣವನ್ನು ಮೋಹಗೊಳಿಸುವಂತೆ ತೋರುತ್ತಿರುವೆ. ಯಾಕೆಂದರೆ

ಅ ೨ ಶ್ಲೋ ೪೫ ರಲ್ಲಿ ಮೂರು ಗುಣಗಳನ್ನು ಗೆಲ್ಲು ಎಂದು ಹೇಳುವೆ, ತಕ್ಷಣ ಅ ೨ ಶ್ಲೋ. ೪೭ರಲ್ಲಿ ನಿನಗೆ ಕರ್ಮದಲ್ಲಿಯೇ ಅಧಿಕಾರವೆಂದು ಹೇಳುವೆ. ಮತ್ತೊಮ್ಮೆ ಅಂದರೆ ಅ ೨ ಶ್ಲೋ ೩೧ರಲ್ಲಿ ಕ್ಷತ್ರಿಯನಿಗೆ ಧರ್ಮಯುದ್ಧಕ್ಕಿಂತ ಹೆಚ್ಚಿನದು ಯಾವುದೂ ಇಲ್ಲವೆಂದು ಪ್ರವೃತ್ತಿ ಮಾರ್ಗವನ್ನು ಹೇಳುವೆ ನಂತರ ಅ.೨ ಶ್ಲೋ.೪೫ರಲ್ಲಿ ಯೋಗಕ್ಷೇಮದ ಚಿಂತೆಯನ್ನು ಬಿಡೆಂದು ನಿವೃತ್ತಿಮಾರ್ಗವನ್ನು ಬೋಧಿಸುವೆ ಈ ಎರಡನ್ನು ಒಬ್ಬನೇ ಏಕಕಾಲದಲ್ಲಿ ನಡೆಯಿಸುವುದಂತೂ ಅಸಂಭವ ಬೇರೆ ಬೇರೆಯವರು ನಡೆಯಿಸುವ ಮಾರ್ಗಗಳಾದರೆ ನನಗೆ ಎರಡನ್ನೂ ಹೇಳುವ ಕಾರಣವಿಲ್ಲ ಆದ್ದರಿಂದ ನಿನ್ನ ಮಾತು ನನಗೆ ಭ್ರಾಂತಿಯನ್ನುಂಟುಮಾಡಿದೆ ಈ ಕಾರಣದಿಂದ ಯಾವುದರ ಅವಲಂಬನೆಯಿಂದ ನಾನು ಮೋಕ್ಷವನ್ನು ಪಡೆಯುವೆನೋ ಆ ಒಂದನ್ನು ಗೊತ್ತುಮಾಡಿ ಹೇಳು

## ವಿವರಣೆ

ಪ್ರಶ್ನೆ : ತಾವು ಬೆರಕೆಯಾದ ವಚನಗಳ ದ್ವಾರಾ ನನ್ನ ಬುದ್ಧಿಯನ್ನು ಮೋಹಿತವಾಗುವಂತೆ ಮಾಡುತ್ತಿರುವಿರಿ ಎಂಬ ಈ ವಾಕ್ಯದ ಅಭಿಪ್ರಾಯವೇನು ?

ಉತ್ತರ . ಯಾವ ವಚನಗಳಿಂದ ಒಂದು ಸಾಧನವು ನಿಶ್ಚಿತವಾಗಿ ಸ್ಪಷ್ಟರೂಪದಿಂದ ತೋರಿಸಲ್ಪಡುವುದಿಲ್ಲವೋ, ಯಾವುದರಲ್ಲಿ ಅನೇಕ ತರದ ಮಾತುಗಳ ಸಮ್ಮಿಶ್ರಣವಿರುವುದೋ ಆ ಮಾತುಗಳು "ವ್ಯಾಮಿಶ್ರ", ಅಂದರೆ ಎರಡಾರ್ಥಗಳನ್ನು ಕೊಡುವ ಮಾತುಗಳು. ಇಂಥಾ ವಚನಗಳಿಂದ ಶ್ರೋತೃವಿನ ಬುದ್ಧಿಯು ಯಾವುದಾದರೂ ಒಂದು ನಿಶ್ಚಯಕ್ಕೆ ಮುಟ್ಟದೆ ಮೋಹಿತವಾಗುತ್ತದೆ ಶ್ರೀಕೃಷ್ಣನ ವಚನಗಳ ತಾತ್ಪರ್ಯವನ್ನು ತಿಳಿಯದ ಕಾರಣದಿಂದ ಅರ್ಜುನನಿಗೂ ಸಹ ಶ್ರೀಕೃಷ್ಣನ ವಚನಗಳು ಮಿಶ್ರವಾಗಿ ಪ್ರತೀತವಾಗುತ್ತಿದ್ದವು ಯಾಕೆಂದರೆ ಅ ೨ ಶ್ಲೋ. ೪೯ರಲ್ಲಿ "ಬುದ್ಧಿಯೋಗಕ್ಕಿಂತ ಕರ್ಮವು ಅತ್ಯಂತ ನಿಕೃಷ್ಟವಾಗಿದೆ, ನೀನು ಬುದ್ಧಿಯನ್ನೇ ಆಶ್ರಯಿಸು" ಎಂಬ ಈ ವಾಕ್ಯದಿಂದ ಅರ್ಜುನನು, ಶ್ರೀಕೃಷ್ಣನು ಜ್ಞಾನವನ್ನು ಹೊಗಳುವುದರ ಜೊತೆಗೆ ಕರ್ಮವನ್ನು ನಿಂದಿಸುತ್ತಾನೆ ನನ್ನನ್ನು ಜ್ಞಾನದ ಆಶ್ರಯ ಪಡೆಯಲು ಬೋಧಿಸುತ್ತಾನೆ– ಎಂದು ಅರ್ಥಮಾಡಿಕೊಂಡನು ಮತ್ತು ಅ.೨ ಶ್ಲೋ ೫೦ರಲ್ಲಿ ಬುದ್ಧಿಯುಕ್ತ ಪುರುಷನು ಪುಣ್ಯಪಾಪಗಳನ್ನೂ ಬಿಡುತ್ತಾನೆ – ಎಂದು ಹೇಳುವುದರಿಂದ

ಶ್ರೀಕೃಷ್ಣನು ಪುಣ್ಯಪಾಪರೂಪ ಸಮಸ್ತ ಕರ್ಮಗಳನ್ನು ಸ್ವರೂಪತಃ ತ್ಯಜಿಸುವವನನ್ನು ಬುದ್ಧಿಯುಕ್ತನೆಂದು ಹೇಳುತ್ತಾನೆ ಎಂದು ಅರ್ಥಮಾಡಿಕೊಂಡನು ಇದಕ್ಕೆ ವಿಪರೀತವಾಗಿ ಅ.೨ ಶ್ಲೋ ೪೭ರಲ್ಲಿ "ನಿನಗೆ ಕರ್ಮದಲ್ಲಿಯೇ ಅಧಿಕಾರ" ಮತ್ತು ಅ ೨ ಶ್ಲೋ ೪೮ರಲ್ಲಿ "ನೀನು ಯೋಗದಲ್ಲಿ ಸ್ಥಿತನಾಗಿ ಕರ್ಮವನ್ನು ಮಾಡು" ಎಂಬ ವಾಕ್ಯಗಳಿಂದ ಅರ್ಜುನನು ಶ್ರೀಕೃಷ್ಣನು ನನ್ನನ್ನು ಕರ್ಮಗಳಲ್ಲಿ ನಿಯುಕ್ತ ಮಾಡುತ್ತಾನೆ ಎಂದುಕೊಂಡನು ಮತ್ತು ಅ ೨ ಶ್ಲೋ ೪೫ ರಲ್ಲಿ "ನಿಸ್ತ್ರೈಗುಣ್ಯೋಭವ," "ಆತ್ಮವಾನ್‌ಭವ" ಮೊದಲಾದ ವಚನಗಳಿಂದ ಕರ್ಮದ ತ್ಯಾಗವನ್ನೂ, ಮತ್ತು ಅ ೨ ಶ್ಲೋ ೧೮ರಲ್ಲಿ "ತಸ್ಮಾದ್ಯುಧ್ಯಸ್ವ ಭಾರತ" ಮತ್ತು ಅ ೨ ಶ್ಲೋ. ೩೮ರಲ್ಲಿ "ತಸ್ಮಾದ್ಯೋಗಾಯ ಯುಜ್ಯಸ್ವ" ಎಂಬ ಮೊದಲಾದ ವಚನಗಳು ಕರ್ಮಗಳ ಪ್ರೇರಣೆಯೆಂದು ತಿಳಿದನು ಈ ಉಪಯುಕ್ತ ವಚನಗಳಿಂದ ಅರ್ಜುನನಿಗೆ ವಿರೋಧವು ಕಂಡುಬಂತು. ಈ ಕಾರಣದಿಂದ ಅವನು ಎರಡು ಸಾರೆ "ಇವ" ಪದವನ್ನು ಪ್ರಯೋಗ ಮಾಡಿ ಯದ್ಯಪಿ ವಾಸ್ತವವಾಗಿ ನೀವು ನನಗೆ ಸ್ಪಷ್ಟ ಮತ್ತು ಪ್ರತ್ಯೇಕ–ಪ್ರತ್ಯೇಕ ಸಾಧನಗಳನ್ನು ಬೋಧಿಸಿದರೂ, ಯಾವ ಮಾತನ್ನೂ ಸೇರಿಸಿ ಹೇಳದೆ ಇದ್ದರೂ ತಥಾ ತಾವು ನನಗೆ ಪರಮ ಪ್ರಿಯರೂ ಮತ್ತು ಹಿತವನ್ನು ಬಯಸುವವರೂ ಆದುದರಿಂದ ನನ್ನ ಮೋಹವನ್ನು ನಾಶಮಾಡಲು ಉಪದೇಶ ಮಾಡುತ್ತಿದ್ದರೂ ನನ್ನ ಅಜ್ಞಾನದಿಂದ ನನಗೆ ತಾವು ಪರಸ್ಪರ ವಿರುದ್ಧ ಮತ್ತು ಮಿಶ್ರವಚನಗಳಿಂದ ನನ್ನ ಬುದ್ಧಿಗೆ ಮೋಹವನ್ನು ಉಂಟುಮಾಡುವಂತೆ ತೋರುತ್ತದೆ ಅಂದನು.

ಪ್ರಶ್ನೆ : ಒಂದು ಪಕ್ಷ ಅರ್ಜುನನಿಗೆ ಅ ೨ ಶ್ಲೋ.೪೯–೬೦ ಅನ್ನು ಕೇಳುತ್ತಲೇ ಭ್ರಮೆಯುಂಟಾಗಿದ್ದರೆ ಆ ಪ್ರಕರಣವು ಮುಗಿಯುತ್ತಲೇ ತನ್ನ ಭ್ರಮೆ ನಿವಾರಣೆಗಾಗಿ ಶ್ರೀಕೃಷ್ಣನನ್ನು ಏಕೆ ಪ್ರಶ್ನೆ ಮಾಡಲಿಲ್ಲ ? ಮಧ್ಯೆ ಇಷ್ಟು ವ್ಯವಧಾನವೇಕೆ ?

ಉತ್ತರ: ಅರ್ಜುನನಿಗೆ ಅಲ್ಲಿಯೇ ಶಂಕೆ ಬಂದದ್ದೂ ಸರಿಯೆ. ೩೫ನೇ ಶ್ಲೋಕದಲ್ಲಿಯೇ ಶಂಕಾ ನಿವಾರಣೆಗಾಗಿ ಪ್ರಶ್ನೆಮಾಡಬೇಕಾಗಿತ್ತು, ಆದರೆ ೫೩ನೇ ಶ್ಲೋಕದಲ್ಲಿ ಶ್ರೀಕೃಷ್ಣನು, "ನಿನ್ನ ಬುದ್ಧಿಯು ಮೋಹರೂಪ ಕಳವಳದಿಂದ ದಾಟಿ ಪರಮಾತ್ಮನ ಸ್ವರೂಪದಲ್ಲಿ ಸ್ಥಿರವಾದಾಗ ನೀನು ಪರಮಾತ್ಮನಲ್ಲಿ ಸಂಯೋಗವೆಂಬ ಯೋಗವನ್ನು ಪ್ರಾಪ್ತಿಮಾಡಿಕೊಳ್ಳುವೆ" ಎಂದು ಹೇಳಲು

ಅದನ್ನು ಕೇಳಿ ಅರ್ಜುನನು, ತನ್ನ ಮನಸ್ಸಿನಲ್ಲಿ ಪರಮಾತ್ಮನನ್ನು ಪ್ರಾಪ್ತಿಮಾಡಿಕೊಂಡ ಸ್ಥಿರಬುದ್ಧಿಯುಕ್ತ ಪುರುಷನ ಲಕ್ಷಣ ಮತ್ತು ಆಚರಣೆಯನ್ನು ತಿಳಿದುಕೊಳ್ಳುವ ಇಚ್ಛೆಯಿಂದ ಪ್ರಥಮ ಶಂಕೆಯನ್ನೂ ಮನಸ್ಸಿನಲ್ಲಿ ಇಟ್ಟುಕೊಂಡು ಸ್ಥಿತಪ್ರಜ್ಞನ ವಿಷಯವಾಗಿ ಪ್ರಶ್ನೆ ಮಾಡಿದನು. ಅದಕ್ಕೆ ಉತ್ತರವು ದೊರೆಯುತ್ತಲೇ ಈ ಶಂಕೆಯನ್ನು ಮುಂದಿಟ್ಟನು. ಒಂದು ಪಕ್ಷ ಮೊದಲೇ ಈ ಪ್ರಸಂಗವನ್ನು ಎತ್ತಿಕೊಂಡಿದ್ದರೆ ಸ್ಥಿತಪ್ರಜ್ಞ ಸಂಬಂಧ ಪ್ರಸಂಗದಲ್ಲಿ ಮತ್ತಷ್ಟು ವ್ಯವಧಾನ ಬೀಳುತ್ತಿತ್ತು

ಪ್ರಶ್ನೆ  ಯಾವುದರಿಂದ ಶ್ರೇಯಸ್ಸುಂಟಾಗುವುದೋ ಆ ಮಾತನ್ನು ನಿಶ್ಚಿತಮಾಡಿ ಹೇಳು ಎಂಬ ವಾಕ್ಯದ ಭಾವವೇನು ?

ಉತ್ತರ  ಈ ವಾಕ್ಯದಿಂದ ಅರ್ಜುನನು – ಇಲ್ಲಿಯವರೆಗೆ ತಾವು ಮಾಡಿದ ಉಪದೇಶಗಳಲ್ಲಿ ವಿರೋಧವು ಪ್ರತೀತಿಯಾಗುವುದರಿಂದ ನಾನು ನನ್ನ ಕರ್ತವ್ಯವನ್ನು ನಿರ್ಣಯಿಸಲಾರದೆ ಹೋದೆನು  ನನ್ನ ಬುದ್ಧಿಗೆ ತಾವು ಯುದ್ಧಕ್ಕಾಗಿ ಆಜ್ಞೆ ಮಾಡುವಿರಾ ? ಇಲ್ಲವೆ ಸಮಸ್ತ ಕರ್ಮಗಳನ್ನು ತ್ಯಜಿಸಲು ಹೇಳುವಿರಾ ? ಒಂದು ಪಕ್ಷ ಯುದ್ಧ ಮಾಡಲು ಆಜ್ಞಾಪಿಸುವುದಾದರೆ ಹೇಗೆ ಮಾಡಲು ಆಜ್ಞಾಪಿಸುವಿರಿ ? ಒಂದು ಪಕ್ಷ ಕರ್ಮವನ್ನು ತ್ಯಾಗಮಾಡಲು ಹೇಳಿದರೆ ಕರ್ಮತ್ಯಾಗದ ನಂತರ ನಾನು ಏನು ಮಾಡಲಿ ? ಆದುದರಿಂದ ತಾವು ಸರ್ವವಿಧದಿಂದಲೂ ಯೋಚಿಸಿ, ನನ್ನ ಕರ್ತವ್ಯವನ್ನು ನಿಶ್ಚಯಿಸಿ, ನನಗೆ ಕಲ್ಯಾಣವುಂಟಾಗುವ ಏಕಮಾತ್ರ ನಿಶ್ಚಿತ ಸಾಧನವನ್ನು ಬೋಧಿಸಿರಿ – ಎಂದು ಬೇಡಿಕೊಂಡನು.

ಪ್ರಶ್ನೆ : ಶ್ಲೋಕದಲ್ಲಿರುವ 'ಶ್ರೇಯಃ' ಎಂಬ ಪದಕ್ಕೆ ಮೋಕ್ಷವೆಂದು ಅರ್ಥಮಾಡುವ ಅಭಿಪ್ರಾಯವೇನು ?

ಉತ್ತರ  ಶ್ರೇಯಃ ಪ್ರಾಪ್ತಿಯೆಂದರೆ ಅರ್ಜುನನ ಅಭಿಪ್ರಾಯದಲ್ಲಿ ಈ ಲೋಕ ಮತ್ತು ಪರಲೋಕಗಳ ಭೋಗಪ್ರಾಪ್ತಿಯೆಂದು ಅರ್ಥವಲ್ಲ. ಯಾಕೆಂದರೆ ಭೂಮಿಯ ನಿಷ್ಕಂಟಕ ರಾಜ್ಯ ಮತ್ತು ದೇವತೆಗಳ ಅಧಿಪತ್ಯಗಳು ನನ್ನ ಶೋಕವನ್ನು ದೂರಮಾಡಲಾರವು ಎಂಬ ಮಾತನ್ನು ಅ. ೨ ಶ್ಲೋ.೮ ರಲ್ಲಿ ಮೊದಲೇ ಹೇಳಿರುತ್ತಾನೆ. ಆದುದರಿಂದ ಶ್ರೇಯಃಪ್ರಾಪ್ತಿಯೆಂದರೆ ಅವನ ಅಭಿಪ್ರಾಯದಲ್ಲಿ ಶೋಕ–ಮೋಹಗಳು ಸರ್ವಥಾ ನಾಶವಾಗಿ ಶಾಶ್ವತ

ಶಾಂತಿ ಮತ್ತು ನಿತ್ಯಾನಂದವನ್ನುಂಟುಮಾಡುವ ನಿತ್ಯವಸ್ತುವಿನ ಪ್ರಾಪ್ತಿಯೇ ಆಗಿದೆ. ಆದುದರಿಂದ 'ಶ್ರೇಯಃ' ಎಂಬುದಕ್ಕೆ ಮೋಕ್ಷವೆಂದೇ ತಿಳಿಯಬೇಕು.

ಪ್ರಶ್ನೆ : ಇಲ್ಲಿಗೆ ಅರ್ಜುನನ ಪ್ರಶ್ನೆಯಾದ ಎರಡು ಶ್ಲೋಕಗಳು ಮುಗಿದವು. ಈ ಎರಡು ಶ್ಲೋಕಗಳ ಅಭಿಪ್ರಾಯವನ್ನು ಸಂಕ್ಷೇಪವಾಗಿ ಹೇಗೆ ತಿಳಿದುಕೊಳ್ಳಬೇಕು ?

ಉತ್ತರ : ಕೃಷ್ಣಾ ! ಜ್ಞಾನಯೋಗ ಕರ್ಮಯೋಗ ಎರಡನ್ನೂ ಉಪದೇಶಿಸಿದೆ ಈ ಎರಡೂ ಯೋಗಗಳನ್ನು ಒಬ್ಬನೇ ಏಕಕಾಲದಲ್ಲಿ ಅನುಷ್ಠಾನ ಮಾಡಲು ಸಾಧ್ಯವೇ ? ಇಲ್ಲವೇ ಬೇರೆ ಬೇರೆ ಪುರುಷರು ಅನುಷ್ಠಾನ ಮಾಡಬೇಕೆ ? ಎರಡನ್ನೂ ಒಬ್ಬನೇ ಅನುಷ್ಠಾನ ಮಾಡಬೇಕೆಂದು ಹೇಳುವುದಾದರೆ ಮೋಕ್ಷಪ್ರಾಪ್ತಿಯ ವಿಷಯದಲ್ಲಿ ಕರ್ಮಯೋಗಕ್ಕಿಂತ ಜ್ಞಾನಯೋಗವು ಮೇಲೆ ? ಇಲ್ಲವೇ ಎರಡೂ ಸಮಾನವೆ ? ಕರ್ಮಯೋಗಕ್ಕಿಂತ ಜ್ಞಾನಯೋಗವು ಮೇಲೆಂದು ನಿನ್ನ ಮತವಾದರೆ, ಜ್ಞಾನಯೋಗವನ್ನು ಅನುಸರಿಸೆಂದು ಹೇಳುವುದನ್ನು ಬಿಟ್ಟು ಕಡಿಮೆಯದಾದ ಕರ್ಮಯೋಗವನ್ನು ಆಚರಿಸೆಂದು ಏಕೆ ಹೇಳುವೆ ? ಎರಡೂ ಸಮಾನವೆಂದು ನಿನ್ನ ಮತವಾದರೆ ಸೌಮ್ಯವಾದ ಜ್ಞಾನಯೋಗವು ಇರುತ್ತಿರಲು ಅದನ್ನು ಬಿಟ್ಟು ಗುರುಗಳನ್ನು ಬಂಧುಗಳನ್ನು ವಧಿಸುವುದಾದ ಮಹಾ ಕ್ರೂರತೆಯಿಂದ ಕೂಡಿದ ಯುದ್ಧರೂಪ ಕರ್ಮದಲ್ಲಿ ನನ್ನನ್ನು ಏಕೆ ಪ್ರೇರೇಪಿಸುವೆ ?

ಜ್ಞಾನಯೋಗಕ್ಕೆ ಕರ್ಮಯೋಗಕ್ಕೆ ಒಬ್ಬನೇ ಅಧಿಕಾರಿಯಲ್ಲವೆಂದೂ ಬೇರೆ ಬೇರೆ ಪುರುಷರು ಅಧಿಕಾರಿಗಳೆಂದೂ ನಿನ್ನ ಮತವಾದರೆ, ಎರಡನ್ನೂ ನನಗೆ ಏಕೆ ಬೋಧಿಸುವೆ ? ಆದ್ದರಿಂದ ನಿನ್ನ ಭಾವವು ಇದೇ ಎಂದು ಗ್ರಹಿಸಲಾರದೆ ಹೋಗಿದ್ದೇನೆ. ನಿನ್ನ ಮಾತುಗಳು ಮಂದಬುದ್ಧಿಯವನಾದ ನನಗೆ ಇಲ್ಲದ ಭ್ರಮೆಯನ್ನುಂಟುಮಾಡುವಂತೆ ತೋರುತ್ತವೆ. ಆದ್ದರಿಂದ ನನ್ನ ಅಧಿಕಾರಕ್ಕೆ ಅನುಸಾರವಾಗಿ ಜ್ಞಾನಯೋಗವೋ ಕರ್ಮಯೋಗವೋ ಯಾವುದಾದರೂ ಒಂದನ್ನು ಹೇಳು ನನ್ನ ಅಧಿಕಾರವನ್ನು ಅನುಸರಿಸಿ ನೀನು ಹೇಳಿದ್ದನ್ನು ಅನುಷ್ಠಾನಮಾಡಿ ಮೋಕ್ಷವನ್ನು ಪಡೆದುಕೊಳ್ಳುತ್ತೇನೆ ಎಂಬುದು ಅರ್ಜುನನ ಪ್ರಶ್ನೆಯ ಭಾವ.

ಸಂಬಂಧ ಅರ್ಜುನನ ಪ್ರಶ್ನೆಯನ್ನು ಕೇಳಿ ಅವನ ನಿಶ್ಚಿತವಾದ ಕರ್ತವ್ಯವನ್ನು ಬೋಧಿಸುವ ಉದ್ದೇಶದಿಂದ ಮೊದಲು ಅವನ ಪ್ರಶ್ನೆಗೆ ಉತ್ತರವನ್ನು ಕೊಡುತ್ತಾ, ನನ್ನ ವಚನವು 'ವ್ಯಾಮಿಶ್ರ' ಅಂದರೆ ದ್ವಂದ್ವಾರ್ಥವನ್ನು ಕೊಡುವುದಲ್ಲ. ಅದು ಸರ್ವಥಾ ಸ್ಪಷ್ಟವಾಗಿದೆ ಎಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ

ಶ್ರೀ ಭಗವಾನುವಾಚ

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ । ಪುರಾ ಪ್ರೋಕ್ತಾ ಮಯಾಽನಘ।**
**ಜ್ಞಾನಯೋಗೇನ ಸಾಂಖ್ಯಾನಾಂ। ಕರ್ಮಯೋಗೇನ ಯೋಗಿನಾಂ ||೩||**

ತಾತ್ಪರ್ಯ : ಪಾಪರಹಿತನಾದ ಅರ್ಜುನನೇ, ಕೇಳು ಈ ಬ್ರಹ್ಮಾಂಡದಲ್ಲಿ ಉಳಿದ ಲೋಕಗಳೆಲ್ಲ ಪುಣ್ಯದ ಫಲವಾದ ಸುಖವನ್ನೋ, ಪಾಪದ ಫಲವಾದ ದುಃಖವನ್ನೋ ಬರೇ ಅನುಭವಿಸತಕ್ಕವುಗಳು. ಭೂಲೋಕವು ಆ ಪುಣ್ಯ ಪಾಪಗಳನ್ನು ಸಂಪಾದಿಸುವ ಸ್ಥಳ. ಆದ್ದರಿಂದ ಈ ಲೋಕದಲ್ಲಿ, ಶಾಸ್ತ್ರದಲ್ಲಿ ಹೇಳಿದಂತೆ ನಡೆಯುವ ಯೋಗ್ಯತೆಯುಳ್ಳ ಜನರಿಗಾಗಿ, ಸೃಷ್ಟಿಯ ಕಾಲದಲ್ಲಿಯೇ ನನ್ನಿಂದ ಜನರ ಏಳಿಗೆಗೆ ಸಾಧನವಾದ ಸ್ಥಿತಿಯು ಆತ್ಮಜ್ಞಾನವನ್ನು ಪಡೆಯಬೇಕೆಂಬ ಸಾಧಕರಿಗಾಗಿ ಕರ್ಮಯೋಗದ ಪ್ರಕಾರದಿಂದ ಎರಡು ಪ್ರಕಾರವಾಗಿ ಹೇಳಲ್ಪಟ್ಟಿತು

**ವಿವರಣೆ**

ಪ್ರಶ್ನೆ . "ಅಸ್ಮಿನ್‌ಲೋಕೆ" ಪದವು ಯಾವ ಲೋಕದ ವಾಚಕ ?

ಉತ್ತರ : ಈ ಪದವು ಈ ಮನುಷ್ಯ ಲೋಕದ ವಾಚಕವಾಗಿದೆ. ಯಾಕೆಂದರೆ ಕರ್ಮಯೋಗ ಮತ್ತು ಜ್ಞಾನಯೋಗ ಈ ಎರಡಕ್ಕೂ ಮನುಷ್ಯನೇ ಅಧಿಕಾರಿ.

ಪ್ರಶ್ನೆ · "ನಿಷ್ಠಾ" ಎಂಬ ಪದದ ಅರ್ಥವೇನು ? ಮತ್ತು ಅದರೊಂದಿಗೆ "ದ್ವಿವಿಧಾ" ಎಂಬ ವಿಶೇಷಣವನ್ನು ಸೇರಿಸುವ ಭಾವವೇನು ?

ಉತ್ತರ: "ನಿಷ್ಠಾ" ಅಂದರೆ "ಸ್ಥಿತಿ" ಅದರೊಂದಿಗೆ "ದ್ವಿವಿಧಾ" ಎಂಬ ವಿಶೇಷಣವನ್ನು ಸ್ಮರಿಸಿ ಶ್ರೀಕೃಷ್ಣನು, ಪ್ರಧಾನವಾಗಿ ಸಾಧನದ ಸ್ಥಿತಿಯಲ್ಲಿ ಎರಡು ಭೇದಗಳಿರುತ್ತವೆ ಎಂಬ ಭಾವವನ್ನೂ ತೋರಿಸಿರುತ್ತಾನೆ.

ಪ್ರಶ್ನೆ: ಆ ಎರಡು ಭೇದಗಳ ಸ್ವರೂಪವೇನು ?

ಉತ್ತರ. ೧. ಒಂದು ಸ್ಥಿತಿಯಲ್ಲಿ ಮನುಷ್ಯನು ಆತ್ಮ ಮತ್ತು ಪರಮಾತ್ಮರ ಏಕತೆಯನ್ನು ಒಪ್ಪಿ ತನ್ನನ್ನು ಬ್ರಹ್ಮವೆಂದು ಭಾವಿಸಿರುತ್ತಾನೆ.

೨. ಮತ್ತೊಂದರಲ್ಲಿ ಪರಮೇಶ್ವರನು ಸರ್ವ ಶಕ್ತಿವಂತ ಮತ್ತು ಸರ್ವ ಜಗತ್ತಿನ ಕರ್ತ, ಹರ್ತಾ, ಸ್ವಾಮೀ ಎಂದೂ, ತನ್ನನ್ನು ಪರಮೇಶ್ವರನ ಆಜ್ಞಾಕಾರೀ ಸೇವಕನೆಂದೂ ತಿಳಿಯುತ್ತಾನೆ

ಪ್ರಶ್ನೆ. ಜ್ಞಾನನಿಷ್ಠೆ ಎಂಬ ಮೊದಲಿನ ನಿಷ್ಠೆಯನ್ನು ವಿಶೇಷವಾಗಿ ವರ್ಣಿಸಿರಿ.

ಉತ್ತರ. ಸಾವಧಾನವಾಗಿ ಕೇಳು. ಪ್ರಕೃತಿಯಿಂದ ಉತ್ಪನ್ನವಾದ ಗುಣಗಳೇ ಗುಣಗಳಲ್ಲಿ ವರ್ತಿಸುತ್ತವೆ ನನಗೂ ಈ ಗುಣಗಳಿಗೂ ಯಾವ ಸಂಬಂಧವೂ ಇಲ್ಲ. ಹೀಗೆ ತಿಳಿದು ಮನ, ಇಂದ್ರಿಯ, ಶರೀರಗಳಿಂದ ಆಗುವ ಸಮಸ್ತ ಕ್ರಿಯೆಗಳಲ್ಲಿ ಕರ್ತನೆಂಬ ಅಭಿಮಾನವನ್ನು ತ್ಯಜಿಸಿ, ಯಾವ ಕ್ರಿಯೆಯಲ್ಲಿಯೇ ಆಗಲಿ ಅಥವಾ ಅವುಗಳ ಫಲದಲ್ಲಿಯೇ ಆಗಲಿ ಕಿಂಚಿನ್ಮಾತ್ರ ಅಹಂತಾ, ಮಮತಾ, ಆಸಕ್ತಿ ಮತ್ತು ಕಾಮನೆಗಳನ್ನು ದೂರೀಕರಿಸಿ, ಸಚ್ಚಿದಾನಂದ ಪರಬ್ರಹ್ಮವೇ ತಾನೆಂದು ತಿಳಿದು ನಿರಂತರ 'ಸೋऽಹಂ' ಸ್ಥಿತಿಯಲ್ಲಿ ಇರುವುದೇ ಜ್ಞಾನನಿಷ್ಠೆ. ಇದಕ್ಕೆ ಬ್ರಹ್ಮನಿಷ್ಠೆ ಎನ್ನುತ್ತಾರೆ. ಈ ಸ್ಥಿತಿಯನ್ನು ಪ್ರಾಪ್ತಿ ಮಾಡಿಕೊಂಡ ಸಾಧಕನು ಹರ್ಷ, ಶೋಕ ಮತ್ತು ಕಾಮನೆಗಳೆಂಬ ಅಂತಃಕರಣದ ಧರ್ಮಗಳಿಗೆ ಸಾಕ್ಷಿಯಾಗಿರುತ್ತಾನೆ. ಅವನಿಗೆ ಆಗ ಸರ್ವತ್ರ ಸಮದೃಷ್ಟಿಯುಂಟಾಗುತ್ತದೆ ಆಗ ಅವನ ದೃಷ್ಟಿಯಲ್ಲಿ ಸಂಪೂರ್ಣ ಜಗತ್ತು ತನ್ನಲ್ಲಿ ಸ್ವಪ್ನದಂತೆ ಕಲ್ಪಿತವಾಗಿ ತೋರುತ್ತದೆ. ಅವನಿಗೆ ಎಲ್ಲೆಲ್ಲಿಯೂ ತಾನೇ. ಈ ನಿಷ್ಠೆಗೆ ತಾನು ಬ್ರಹ್ಮವೆಂಬ ಜ್ಞಾನವೇ ಫಲ.

ಪ್ರಶ್ನೆ: ಎರಡನೇ ನಿಷ್ಠೆಯಾದ ಕರ್ಮಯೋಗವನ್ನು ವರ್ಣಿಸಿರಿ.

ಉತ್ತರ. ಪರಮೇಶ್ವರನು ಸರ್ವಶಕ್ತ, ಸರ್ವಾಧಾರ, ಸರ್ವವ್ಯಾಪಿ, ಸರ್ವರ ಸುಹೃದ ಮತ್ತು ಸರ್ವ ಪ್ರೇರಕನೆಂದು ತಿಳಿದು, ತನ್ನನ್ನು ಸರ್ವಥಾ

ಅವನ ಅಧೀನನೆಂದು ತಿಳಿದು ಸಮಸ್ತ ಕರ್ಮ ಹಾಗೂ ಅವುಗಳ ಫಲವನ್ನು ಪರಮೇಶ್ವರನಿಗೆ ಸಮರ್ಪಿಸಿ, ಅವನ ಆಜ್ಞೆ ಮತ್ತು ಪ್ರೇರಣೆಯಂತೆ ಅವನ ಪೂಜೆಯೆಂದು ತಿಳಿದು ಅವನು ಮಾಡಿಸಿದಂತೆ ಸಮಸ್ತ ಕರ್ಮಗಳನ್ನು ಮಾಡುತ್ತಾ, ಆ ಕರ್ಮಗಳಲ್ಲಿ ಹಾಗೂ ಅವುಗಳ ಫಲದಲ್ಲಿ ಕಿಂಚಿನ್ಮಾತ್ರವೂ ಆಸಕ್ತಿಯಿಲ್ಲದೆ ಇರುವುದು. ಇದಲ್ಲದೆ ಪರಮೇಶ್ವರನ ಪ್ರತ್ಯೇಕ ವಿಧಾನದಲ್ಲಿ ಸದಾ ಸಂತುಷ್ಟನಾಗಿದ್ದು, ನಿರಂತರ ಪರಮೇಶ್ವರನ ಗುಣ ಕೀರ್ತನೆ ಮಾಡುತ್ತಾ ಇರುವುದಕ್ಕೆ ಕರ್ಮಯೋಗವೆನ್ನುತ್ತಾರೆ ಈ ಕರ್ಮಯೋಗ ನಿಷ್ಠೆಯನ್ನು ಪ್ರಾಪ್ತಿ ಮಾಡಿಕೊಂಡ ಸಾಧಕನು ರಾಗ, ದ್ವೇಷ, ಕಾಮ, ಕ್ರೋಧಾದಿ ಅವಗುಣದಿಂದ ದೂರವಾಗುತ್ತಾನೆ ಅವನಿಗೆ ಎಲ್ಲೆಲ್ಲಿಯೂ ಸಮತ್ವವೇ ಅವನ ದೃಷ್ಟಿಯಲ್ಲಿ ಸಂಪೂರ್ಣ ಜಗತ್ತು ಭಗವಂತನ ಸ್ವರೂಪ ಈ ಸ್ಥಿತಿಗೆ ಭಗವತ್ಪ್ರಾಪ್ತಿಯೇ ಫಲ.

ಪ್ರಶ್ನೆ. ಎರಡು ಪ್ರಕಾರದ ನಿಷ್ಠೆಗಳು ನನ್ನಿಂದ ಮೊದಲು ಹೇಳಲ್ಪಟ್ಟಿವೆ ಎಂದರೇನು ?

ಉತ್ತರ ಇದರ ಅಭಿಪ್ರಾಯವೇನೆಂದರೆ – ಈ ಎರಡು ನಿಷ್ಠೆಗಳನ್ನು ನಾನು ಈಗ ನಿನಗೆ ಹೇಳಿದೆನೆಂದು ಭಾವಿಸಬೇಡ ಸೃಷ್ಟಿಯ ಆದಿಕಾಲದಲ್ಲಿ ಮತ್ತು ಸೃಷ್ಟಿ ಆದನಂತರ ಅನೇಕ ಅವತಾರ ಹಾಗೂ ಮಹಾತ್ಮರ ಮುಖದಿಂದ ಈ ಎರಡರ ಸ್ವರೂಪವನ್ನು ಪ್ರತ್ಯೇಕವಾಗಿ ಬೋಧಿಸಿರುತ್ತೇನೆ ಇದೇ ವಿಷಯವನ್ನು ಈಗ ನಿನಗೂ ಸಹ ಎರಡನೇ ಅಧ್ಯಾಯದ ಹನ್ನೊಂದನೇ ಶ್ಲೋಕದಿಂದ ಮೂವತ್ತನೇ ಶ್ಲೋಕದವರೆಗೆ ಅದ್ವಿತೀಯ ಆತ್ಮ ಸ್ವರೂಪವನ್ನು ಪ್ರತಿಪಾದಿಸಿರುತ್ತೇನೆ. ಈ ಸಾಂಖ್ಯಯೋಗದ ದೃಷ್ಟಿಯನ್ನು ಅವಲಂಬಿಸಿ ಯುದ್ಧವನು ಮಾಡೆಂದು ಹೇಳಿರುತ್ತೇನೆ. ಮತ್ತು ೩೯ನೇ ಶ್ಲೋಕದಲ್ಲಿ ಯೋಗ ವಿಷಯಕ ಬುದ್ಧಿಯ ವರ್ಣನೆಯನ್ನು ಪ್ರಸ್ತಾವನೆ ಮಾಡಿ ೪೦ನೇ ಶ್ಲೋಕದಿಂದ ೫೩ನೇ ಶ್ಲೋಕದವರೆಗೆ ಫಲ ಸಹಿತ ಕರ್ಮಯೋಗವನ್ನು ವರ್ಣಿಸುತ್ತಾ ಯೋಗದಲ್ಲಿ ಸ್ಥಿತನಾಗಿ ಯುದ್ಧಮಾಡಲು ಹೇಳಿದೆನು; ಹಾಗೂ ಎರಡನ್ನೂ ವಿಭಾಗಿಸುವುದಕ್ಕಾಗಿ ೩೯ನೇ ಶ್ಲೋಕದಲ್ಲಿ ಸ್ಪಷ್ಟವಾಗಿ ಇದಕ್ಕಿಂತ ಪೂರ್ವ ನಾನು ಸಾಂಖ್ಯ ವಿಷಯಕವಾದ ಉಪದೇಶ ಮಾಡಿರುತ್ತೇನೆ ಈಗ ಯೋಗ ವಿಷಯದ ಉಪದೇಶವನ್ನು ಕೇಳು ಎಂದು ಹೇಳಿರುತ್ತೇನೆ. ಇದರಿಂದ ನನ್ನ ಮಾತುಗಳು 'ವ್ಯಾಮಿಶ್ರ' ಅಲ್ಲವೆಂದು ಸ್ಪಷ್ಟವಾಗುತ್ತದೆ.

ಪ್ರಶ್ನೆ ಅರ್ಜುನನನ್ನು 'ಅನಘ' ಎಂದು ಸಂಬೋಧಿಸುವ ಭಾವವೇನು?

ಉತ್ತರ · ಪಾಪವಿಲ್ಲದ ಮನುಷ್ಯನಿಗೆ 'ಅನಘ' ನೆಂದು ಹೆಸರು. ಅರ್ಜುನ ನನ್ನು ಅನಘನೆಂದು ಸಂಬೋಧಿಸಿ ಶ್ರೀಕೃಷ್ಣನು, ಪಾಪಯುಕ್ತ ಮತ್ತು ಪಾಪ ಪರಾಯಣನಾದವನು ಮೇಲೆ ಹೇಳಿದ ಎರಡು ನಿಷ್ಠೆಗಳಲ್ಲಿ ಯಾವ ನಿಷ್ಠೆ ಯನ್ನೂ ಸಾಧಿಸಲಾರನು ನೀನಾದರೂ ಪಾಪರಹಿತನಾದುದರಿಂದ ಇವು ಗಳನ್ನು ಸಹಜವಾಗಿ ಸಾಧಿಸಬಲ್ಲೆ ಎಂಬ ಭಾವವನ್ನು ವ್ಯಕ್ತಪಡಿಸಿರುತ್ತಾನೆ.

ಪ್ರಶ್ನೆ. ಸಾಂಖ್ಯಯೋಗಿಗಳ ನಿಷ್ಠೆಯು ಜ್ಞಾನಯೋಗದಿಂದಲೂ ಮತ್ತು ಯೋಗಿಗಳಿಗೆ ಕರ್ಮಯೋಗದಿಂದಲೂ ಎಂಬುದರ ತಾತ್ಪರ್ಯವೇನು?

ಉತ್ತರ · ಎರಡೂ ಪ್ರಕಾರದ ನಿಷ್ಠೆಗಳಲ್ಲಿ ಸಾಂಖ್ಯಯೋಗಿಗಳ ನಿಷ್ಠೆಯು ಜ್ಞಾನಯೋಗದ ಸಾಧನವನ್ನು ಮಾಡುತ್ತಾ ದೇಹಾತ್ಮ ಬುದ್ಧಿಯು ಸರ್ವಥಾ ನಾಶವಾದ ಮೇಲೆ ಸಿದ್ಧವಾಗುತ್ತದೆ. ಮತ್ತು ಕರ್ಮಯೋಗಿಗಳ ನಿಷ್ಠೆಯು ಕರ್ಮಯೋಗದ ಸಾಧನ ಮಾಡುತ್ತಾ ಕರ್ಮಗಳಲ್ಲಿ ಮತ್ತು ಅವುಗಳ ಫಲ ಗಳಲ್ಲಿ ಆಸಕ್ತಿಯು ನಾಶವಾದ ಮೇಲೆ ಸಿದ್ಧಿಸುತ್ತದೆ. ಈ ಎರಡೂ ನಿಷ್ಠೆಗಳ ಅಧಿಕಾರಿಗಳು ಬೇರೆ ಬೇರೆಯೇ. ಆದರೆ ಇದರಲ್ಲಿ ತಿಳಿದುಕೊಳ್ಳಬೇಕಾದ ವಿಷಯವೇನೆಂದರೆ – ಜ್ಞಾನನಿಷ್ಠೆಯು ಸಾಧ್ಯ, ಕರ್ಮನಿಷ್ಠೆಯು ಸಾಧನ.

ಪ್ರಶ್ನೆ ಒಂದು ಪಕ್ಷ ಯಾರಾದರೂ ಜ್ಞಾನಯೋಗ, ಕರ್ಮಯೋಗ ಎರಡನ್ನೂ ಒಂದೇ ಕಾಲದಲ್ಲಿ ಆಚರಿಸುತ್ತಾರೆಂದರೆ ಬರುವ ಕಷ್ಟವೇನು ?

ಉತ್ತರ. ಈ ಎರಡೂ ಸಾಧನಗಳು ಪರಸ್ಪರ ಭಿನ್ನವಾಗಿರುವುದರಿಂದ ಒಬ್ಬನೇ ಒಂದೇ ಕಾಲದಲ್ಲಿ ಸಾಧಿಸಲಾಗುವುದಿಲ್ಲ. ಯಾಕೆಂದರೆ ಸಾಂಖ್ಯ ಯೋಗದ ಸಾಧನೆಯಲ್ಲಿ ಆತ್ಮ ಮತ್ತು ಪರಮಾತ್ಮ ಒಂದೇ ಎಂದು ತಿಳಿದು ಪರಮಾತ್ಮನು ನಿರ್ಗುಣನೂ ನಿರಾಕಾರನೂ ಹಾಗೂ ಸಚ್ಚಿದಾನಂದ ರೂಪನೂ ಎಂದು ಭಾವಿಸಬೇಕಾಗುತ್ತದೆ ಕರ್ಮಯೋಗದಲ್ಲಿ ಫಲಾಸಕ್ತಿಯ ತ್ಯಾಗ ಪೂರ್ವಕ ಕರ್ಮವನ್ನು ಮಾಡುತ್ತಾ ಭಗವಂತನು ಸರ್ವವ್ಯಾಪಿ, ಸರ್ವಶಕ್ತ ಮತ್ತು ಸರ್ವೇಶ್ವರನೆಂದು ತಿಳಿದು ಆಚರಿಸಬೇಕಾಗುತ್ತದೆ. ಆದುದರಿಂದ ಈ ಎರಡೂ ನಿಷ್ಠೆಗಳು ಒಂದೇ ಕಾಲದಲ್ಲಿ ಒಬ್ಬ ಮನುಷ್ಯನಿಂದ ಸಾಧ್ಯವಿಲ್ಲ.

ಸಂಬಂಧ : ಇದರಿಂದ ಜ್ಞಾನ–ಕರ್ಮ ಈ ಎರಡೂ ಒಂದು ಮತ್ತೊಂದರ ಅಪೇಕ್ಷೆಯಿಲ್ಲದೆ ಸಾಕ್ಷಾತ್ ಮೋಕ್ಷಕ್ಕೆ ಹೇತುವಾಗುತ್ತವೆ ಎಂಬ ಶಂಕೆ ಬಂದರೆ

ಅದು ಯುಕ್ತವಲ್ಲ, ಏಕೆಂದರೆ "ನಕರ್ಮಣಾ ನಪ್ರಜಯಾ" ಇತ್ಯರ್ಥಕ ಶ್ರುತಿ ಯಿಂದ ಕರ್ಮವು ಮೋಕ್ಷಕ್ಕೆ ಸಾಧನವಲ್ಲವೆಂಬುದು ಸ್ಪಷ್ಟವಾಗುತ್ತದೆ ಮತ್ತು ''ಜ್ಞಾನಾದೇವತು ಕೈವಲ್ಯಂ'' ಈ ಶೃತಿಯಿಂದ ಇತರ ಸಾಧನೆಗಳಿಂದ ಬೇರ್ಪಡಿಸಿ ಜ್ಞಾನವೇ ಮೋಕ್ಷಕ್ಕೆ ಸಾಧನವೆಂದು ನಿರ್ಣಯ ಮಾಡಲ್ಪಟ್ಟಿದೆ. ಇದರಿಂದ ಕರ್ಮದಿಂದ ಮೋಕ್ಷವು ಸಂಭವಿಸಲಾರದು ಅತಏವ ಉತ್ಪನ್ನ ವಾದ ಜ್ಞಾನವೇ ಸ್ವಯಂ; ಮತ್ತೊಂದರ ಅಪೇಕ್ಷೆಯಿಲ್ಲದೆ ಪುರುಷನಿಗೆ ಮೋಕ್ಷಸುಖವನ್ನು ಕೊಡಬಲ್ಲದು ಆದರೂ "ಸತ್ವಶುದ್ಧೌ ಧ್ರುವಾಸ್ಮೃತಿಃ" ಅಂದರೆ ಅಂತಃಕರಣ ಶುದ್ಧಿಯ ನಂತರವೇ ನಿಶ್ಚಿತ ಸ್ಮೃತಿಯಾಗುತ್ತದೆ ಎಂಬ ಶೃತಿಯಂತೆ ಅಂತಃಕರಣದ ಶುದ್ಧಿಯಿಲ್ಲದೆ ಜ್ಞಾನವು ಉದಯಿಸಲಾರದು ಆದುದರಿಂದ ಆತ್ಮಜ್ಞಾನವಿಲ್ಲದ ಮುಮುಕ್ಷುವಿಗೆ ಚಿತ್ತಶುದ್ಧಿಗಾಗಿ ಕರ್ಮವನ್ನು ಅವಶ್ಯವಾಗಿ ಆಚರಿಸಬೇಕೆಂಬ ವಿಷಯವು ಮುಂದಿನ ಶ್ಲೋಕದಲ್ಲಿ ಪ್ರತಿ ಪಾದಿಸಲ್ಪಡುತ್ತದೆ

**ನ ಕರ್ಮಣಾಮನಾರಂಭಾ ನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ॥ ೪ ॥**

ತಾತ್ಪರ್ಯ: ಈ ಶ್ಲೋಕದಲ್ಲಿ ಹೋಗಿ ಸೇರುವ ಸ್ಥಾನವನ್ನೂ ಅಲ್ಲಿಗೆ ಸೇರುವ ದಾರಿಯನ್ನೂ ಬೋಧಿಸಿದೆ. ಪ್ರಾಪ್ತಿಮಾಡಿಕೊಳ್ಳುವ ಸ್ಥಾನವೆಂದರೆ ನೈಷ್ಕರ್ಮ್ಯ ಅಂದರೆ ನಿಷ್ಕ್ರಿಯ ಸ್ವರೂಪವಾದ ಪರಬ್ರಹ್ಮ; ದಾರಿ ಯಾವು ದೆಂದರೆ ಕರ್ಮ ಕರ್ಮವು ಉಪಾಯ, ಪ್ರತ್ಯಗಭಿನ್ನ ಪರಬ್ರಹ್ಮವು ಉಪೇಯ ವೆಂದು ತಿಳಿಯಬೇಕು.

ಮನುಷ್ಯನು ಈ ಜನ್ಮದ ಮತ್ತು ಹಿಂದಿನ ಜನ್ಮಗಳ ಪಾಪಗಳನ್ನು ಕಳೆದು, ಮನಸ್ಸನ್ನು ಶುದ್ಧಿಮಾಡಿ, ಜ್ಞಾನವನ್ನು ಗ್ರಹಿಸುವ ಯೋಗ್ಯತೆಯನ್ನು ತಂದುಕೊಡುವ ಯಜ್ಞ ಮೊದಲಾದ ಕರ್ಮಗಳ ಪ್ರಾರಂಭವನ್ನೇ ಮಾಡದೆ ಹಿಂದುಳಿಯುವುದರಿಂದ, ನೈಷ್ಕರ್ಮ್ಯ ಅಂದರೆ ಬ್ರಹ್ಮ ಅರ್ಥಾತ್ ಆತ್ಮನಿಗೆ ಕರ್ಮಗಳ ಸಂಬಂಧವಿಲ್ಲವೆಂಬ ಜ್ಞಾನದಿಂದ ಇರುವಿಕೆಯೇ ಪಡೆಯುವುದಿಲ್ಲ. ಕರ್ಮಗಳನ್ನು ಹಿಡಿಯದೆ ಹೋದರೆ ನಿಷ್ಕ್ರಿಯಾತ್ಮ ಸ್ಥಿತಿಯು ಬರುವುದಿಲ್ಲವೆಂದ ಮೇಲೆ ಕರ್ಮಗಳನ್ನು ಹಿಡಿದರೆ ಅದು ಬರುವುದೆಂದು ಆಯಿತಲ್ಲ, ಅಂದರೆ ನಿಜ,

ಬರುತ್ತದೆ. ಹಾಗಾದರೆ "ಕರ್ಮಣಾಬದ್ಧ್ಯತೆ ಜಂತು" ಎಂಬ ಪ್ರಮಾಣದಂತೆ ಕರ್ಮದ ಪರಿಣಾಮವು ಬಂಧವೆಂದು ಶಾಸ್ತ್ರವು ಹೇಳುತ್ತದಲ್ಲ ಅಂದರೆ ಅದು ಸಕಾಮ ಕರ್ಮಕ್ಕೆ ಸೇರಿದ ಮಾತು ನಿಷ್ಕಾಮ ಕರ್ಮವು ಜ್ಞಾನಕ್ಕೆ ಉಪಾಯ ವೆಂಬುದು ಪ್ರಸಿದ್ಧವೇ ಆಗಿದೆ ಅಂದರೆ ಕರ್ಮದಿಂದ ಚಿತ್ತಶುದ್ಧಿಯಾಗಿ ಜ್ಞಾನ ವಾಗುತ್ತದೆ "ಆತ್ಮನು ಕರ್ಮಗಳ ಸಂಬಂಧವಿಲ್ಲದವನು" ಎಂಬ ಜ್ಞಾನ ವಿಲ್ಲದೆ ಸುಮ್ಮನೆ ಹಿಡಿದ ಕರ್ಮಗಳನ್ನೆಲ್ಲ ಬಿಟ್ಟ ಮಾತ್ರಕ್ಕೆ ಜ್ಞಾನಯೋಗದ ಸ್ಥಿತಿಯನ್ನು ಅಂದರೆ ಮೋಕ್ಷವನ್ನು ಪಡೆಯಲಾಗುವುದಿಲ್ಲ; ತಿಳಿಯಿತೇ ಅರ್ಜುನಾ ? ನೀನೂ ಸಹ ಕರ್ಮಯೋಗದಿಂದ ಚಿತ್ತಶುದ್ಧಿಯನ್ನು ಮಾಡಿ ಕೊಂಡು ಜ್ಞಾನಯೋಗ ದ್ವಾರಾ ಮುಕ್ತನಾಗು

ಸಂಬಂಧ : ಕರ್ಮವನ್ನು ಬಿಡುವುದರಿಂದ ನೈಷ್ಕರ್ಮ್ಯವೆಂಬ ಬ್ರಹ್ಮ ಸ್ಥಿತಿಯು ಏಕೆ ಪ್ರಾಪ್ತಿಯಾಗುವುದಿಲ್ಲ ಎಂಬ ವಿಷಯವು ಮುಂದಿನ ಶ್ಲೋಕ ದಲ್ಲಿ ಪ್ರತಿಪಾದಿಸಲ್ಪಡುತ್ತದೆ.

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯ ಕರ್ಮಕೃತ್ |**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿ ಜೈರ್ಗುಣೈಃ || ೫ ||**

ತಾತ್ಪರ್ಯ : ಯಾವನೂ ಎಂದೂ ಒಂದು ಕ್ಷಣವೂ ಸಹ ಕರ್ಮವನ್ನು ಮಾಡದೆ ಇರುವುದಿಲ್ಲ ಹೇಗೆಂದರೆ– ಪ್ರತಿಯೊಬ್ಬನೂ ತನ್ನ ಸ್ವಭಾವವಾಗಿ ಹುಟ್ಟಿ ಬಂದಿರುವ ಸತ್ವರಜಸ್ತಮೋ ಗುಣಗಳ ಬಲುಮೆಯಿಂದ ತಮ್ಮ ಆಟ ವೇನೂ ನಾಗದೆ ಕರ್ಮವನ್ನು ಮಾಡಿಸಲ್ಪಡುತ್ತಾನೆ. ಎಂದರೆ ಪ್ರತಿ ಒಬ್ಬನೂ ತನ್ನ ಹುಟ್ಟುಗುಣದ ಸೆಳೆತದಂತೆ ಕರ್ಮ ಮಾಡುತ್ತಾನೆ.

## ವಿವರಣೆ

ಪ್ರಶ್ನೆ : ಯಾರೂ ಯಾವಾಗಲೂ ಕ್ಷಣಮಾತ್ರವೂ ಸಹ ಕರ್ಮ ಮಾಡದೆ ಇರುವುದಿಲ್ಲವೆಂಬ ವಾಕ್ಯದ ಭಾವವೇನು ?

ಉತ್ತರ : ಏಳುವುದು, ಕೂಡುವುದು, ತಿನ್ನುವುದು, ಕುಡಿಯುವುದು, ನಿದ್ರಿಸುವುದು, ಎಚ್ಚತ್ತಿರುವುದು, ಯೋಚಿಸುವುದು, ಮನನ ಮಾಡುವುದು,

ಸ್ವಪ್ನ ನೋಡುವುದು, ಧ್ಯಾನ ಮಾಡುವುದು ಮತ್ತು ಸಮಾಧಿಸ್ಥನಾಗುವುದು ಇವೆಲ್ಲವೂ ಕರ್ಮದೊಳಗೆ ಸೇರಿದವುಗಳು. ಆದುದರಿಂದ ಶರೀರವಿರುವವರೆಗೆ ಮನುಷ್ಯನು ತನ್ನ ಪ್ರಕೃತಿಗೆ ಅನುಸಾರವಾಗಿ ಏನನ್ನಾದರೂ ಮಾಡುತ್ತಲೇ ಇರುತ್ತಾನೆ ಯಾರೂ ಕ್ಷಣವೂ ಸಹ ಸ್ವರೂಪತಃ ಕರ್ಮವನ್ನು ತ್ಯಜಿಸಲಾರರು ಏಕೆಂದರೆ ತ್ಯಜಿಸುವುದೂ ಒಂದು ಕರ್ಮವೆ ಆದರೆ ಕರ್ಮದಲ್ಲಿಯ ಕರ್ತೃತ್ವವನ್ನು ತ್ಯಾಗಮಾಡುವುದೇ ನಿಜವಾದ ಕರ್ಮತ್ಯಾಗ

ಪ್ರಶ್ನೆ ಶ್ಲೋಕದಲ್ಲಿಯ "ಕಶ್ಚಿತ್" ಎಂಬ ಪದದಲ್ಲಿ ಗುಣಾತೀತನಾದ ಜ್ಞಾನೀ ಪುರುಷನು ಸೇರಿರುವನೇ ಇಲ್ಲವೆ ?

ಉತ್ತರ. ಗುಣಾತೀತ ಜ್ಞಾನೀ ಪುರುಷನಿಗೆ ಗುಣದಿಂದಲೂ ಅವುಗಳ ಕಾರ್ಯದಿಂದಲೂ ಯಾವ ಸಂಬಂಧವೂ ಇಲ್ಲ. ಆದುದರಿಂದ ಅವನು ಗುಣಕ್ಕೆ ವಶನಾಗಿ ಕರ್ಮ ಮಾಡುತ್ತಾನೆಂದು ಹೇಳಬಾರದು. ಆದುದರಿಂದ ಗುಣಾತೀತ ಜ್ಞಾನೀ ಮಹಾತ್ಮನು "ಕಶ್ಚಿತ್" ಪದದಲ್ಲಿ ಸೇರಿರುವುದಿಲ್ಲ. ತಥಾಪಿ ನೋಡುವವರ ದೃಷ್ಟಿಯಲ್ಲಿ ಮನ, ಬುದ್ಧಿ, ಇಂದ್ರಿಯ ಸಂಘಾತರೂಪ ಶರೀರವಿರುತ್ತದೆ ಆ ಶರೀರದಿಂದ ಅವನ ಮತ್ತು ಜನರ ಪ್ರಾರಬ್ಧಾನುಸಾರ ನಾಮಮಾತ್ರವಾಗಿ ಕರ್ಮವು ನಡೆಯುತ್ತಿರುತ್ತದೆ. ಆದರೆ ಕರ್ತೃತ್ವ ಬುದ್ಧಿ ಇಲ್ಲದ್ದರಿಂದ ಆ ಕರ್ಮಗಳು ವಾಸ್ತವವಾಗಿ ಕರ್ಮಗಳೇ ಅಲ್ಲ ಆದರೆ ಅವನ ಮನ, ಬುದ್ಧಿ, ಇಂದ್ರಿಯಾದಿ ಶರೀರ ಸಂಘಾತವು "ಕಶ್ಚಿತ್" ಪದದಲ್ಲಿ ಸೇರಿರುತ್ತದೆ. ಯಾಕೆಂದರ ಸಂಘಾತವು ಗುಣಗಳ ಕಾರ್ಯವಾದುದರಿಂದ ಗುಣಗಳಿಗೆ ಅತೀತವಾಗಲಾರದು ಶರೀರಕ್ಕಿಂತ ಸರ್ವಥಾ ಅತೀತನಾಗುವುದೇ ಜ್ಞಾನಿಯ ಗುಣಾತೀತ ಸ್ಥಿತಿ.

ಪ್ರಶ್ನೆ ಶ್ಲೋಕದಲ್ಲಿಯ "ಸರ್ವಃ" ಪದವು ಯಾರ ವಾಚಕ ? ಅವರು ಗುಣಗಳಿಗೆ ವಶರಾಗಿ ಕರ್ಮ ಮಾಡುತ್ತಾರೆಂಬುದರ ಭಾವವೇನು ?

ಉತ್ತರ : "ಸರ್ವಃ" ಪದ ಸರ್ವ ಪ್ರಾಣಿವಾಚಕವಾಗಿದ್ದರೂ ಅದನ್ನು ವಿಶೇಷತಃ ಮನುಷ್ಯ ಸಮುದಾಯ ವಾಚಕವೆಂದು ತಿಳಿಯಬೇಕು. ಯಾಕೆಂದರ ಕರ್ಮದಲ್ಲಿ ಮನುಷ್ಯರಿಗೆ ಮಾತ್ರ ಅಧಿಕಾರ. ಪೂರ್ವ ಜನ್ಮದಲ್ಲಿ ಮಾಡಿದ ಕರ್ಮಗಳ ಸಂಸ್ಕಾರ ಜನಿತ ಸ್ವಭಾವಕ್ಕೆ ಅನುಸಾರವಾಗಿ ಪರವಶರಾಗಿ

ಕರ್ಮದಲ್ಲಿ ಪ್ರವೃತ್ತಿಯಾಗುವುದಕ್ಕೆ ಗುಣಗಳಿಗೆ ವಶರಾಗಿ ಕರ್ಮ ಮಾಡು ತ್ತಾರೆ ಎಂದರ್ಥ.

ಪ್ರಶ್ನೆ. "ಗುಣೈಃ" ಪದದೊಂದಿಗೆ "ಪ್ರಕೃತಿಜೈಃ" ಎಂಬ ವಿಶೇಷಣ ವನ್ನು ಕೊಡುವ ಅಭಿಪ್ರಾಯವೇನು ?

ಉತ್ತರ. ಸಾಂಖ್ಯ ಶಾಸ್ತ್ರದಲ್ಲಿ ಗುಣಗಳ ಸಾಮ್ಯಾವಸ್ಥೆಗೆ ಪ್ರಕೃತಿ ಎನ್ನುತ್ತಾರೆ. ಗೀತಾ ಮತದಲ್ಲಿ ಮಾತ್ರ ಮೂರು ಗುಣಗಳು ಪ್ರಕೃತಿಯ ಕಾರ್ಯಗಳೇ. ಈ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಶ್ರೀಕೃಷ್ಣನು "ಗುಣೈಃ" ಪದಕ್ಕೆ "ಪ್ರಕೃತಿಜೈಃ" ಎಂಬ ವಿಶೇಷಣವನ್ನು ಜೋಡಿಸಿರುತ್ತಾನೆ. ಅದರಂತೆ ಅ ೧೩ ಶ್ಲೋಕ ೧೯ರಲ್ಲಿ "ಪ್ರಕೃತಿ ಸಂಭವಾನ್," ೧೩ ೨೧ರಲ್ಲಿ "ಪ್ರಕೃತಿ ಜಾ," ೧೮ ೪೦ರಲ್ಲಿ "ಪ್ರಕೃತಿಜೈಃ" ಎಂಬ ವಿಶೇಷಣಗಳನ್ನು ಜೋಡಿಸಿ ಗುಣಗಳು ಪ್ರಕೃತಿಯ ಕಾರ್ಯವೆಂದು ಪ್ರತಿಪಾದಿಸಿದ್ದಾನೆ

ಪ್ರಶ್ನೆ : ಇಲ್ಲಿ "ಪ್ರಕೃತಿ" ಶಬ್ದವು ಯಾವುದರ ವಾಚಕ ?

ಉತ್ತರ : ಸಮಸ್ತ ಗುಣಗಳ ಮತ್ತು ವಿಕಾರಗಳ ಸಮುದಾಯ ರೂಪವಾದ ಈ ಜಡ ಜಗತ್ತಿನ ಕಾರಣಭೂತವಾದ ಅವ್ಯಕ್ತ, ಅವ್ಯಾಕೃತ ಮತ್ತು ಮಹದ್ಬ್ರಹ್ಮವೆಂದು ಹೇಳಿಸಿಕೊಳ್ಳುವ ಪರಮೇಶ್ವರನ ಅನಾದಿಸಿದ್ಧ ಮೂಲ ಪ್ರಕೃತಿಯು ಪ್ರಕೃತಿಯೆಂದು ಹೇಳಿಸಿಕೊಳ್ಳುತ್ತದೆ.

ಸಂಬಂಧ : ಮೇಲಿನ ಶ್ಲೋಕದಲ್ಲಿ ಮನುಷ್ಯನು ಕ್ಷಣಮಾತ್ರವೂ ಕರ್ಮ ವನ್ನು ಮಾಡದೆ ಇರಲಾರನೆಂದು ಹೇಳಿದೆ ಈ ವಿಷಯದಲ್ಲಿ ಇಂದ್ರಿಯಗಳ ಕ್ರಿಯೆಗಳನ್ನು ತಡೆದು ಮನುಷ್ಯನು ಕರ್ಮಗಳ ತ್ಯಾಗವನ್ನೂ ಮಾಡಬಹು ದಲ್ಲವೇ ಎಂಬ ಶಂಕೆ ಬಂದರೆ ಅದಕ್ಕೆ ಸಮಾಧಾನವು ಮುಂದಿನ ಶ್ಲೋಕದಲ್ಲಿ ಹೇಳಿದೆ.

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥೬॥**

ತಾತ್ಪರ್ಯ : ವಿಷಯಗಳ ಮೇಲಿನ ರಾಗದ್ವೇಷಗಳಿಂದ ಹೊಲಸಾದ ಯಾವನು ಕರ್ಮೇಂದ್ರಿಯಗಳನ್ನು ಬರೀ ಕುತೂಹಲದಿಂದ ಬಿಗಿ ಹಿಡಿದು ಕೊಂಡು ಶಬ್ದ ಮೊದಲಾದ ವಿಷಯಗಳನ್ನು ಮನಸ್ಸಿನಿಂದ ಸ್ಮರಿಸುತ್ತಾ

ಪರಮಾತ್ಮನ ಸ್ವರೂಪವನ್ನು ಸ್ಮರಿಸದೆ ಇರುತ್ತಾನೋ ತಪ್ಪು ತಿಳುವಳಿಕೆಯ ಮನಸ್ಸಿನವನಾದ ಅವನು ಮಿಥ್ಯಾಚಾರಿ ಎನಿಸುತ್ತಾನೆ.

## ವಿವರಣೆ

ಪ್ರಶ್ನೆ : ಈ ಶ್ಲೋಕದಲ್ಲಿ ಬಂದಿರುವ "ಕರ್ಮೇಂದ್ರಿಯಾಣಿ" ಎಂಬ ಪದವು ಯಾವ ಇಂದ್ರಿಯಗಳ ವಾಚಕವಾಗಿದೆ ? ಮತ್ತು ಅವುಗಳನ್ನು ಹಠ ಪೂರ್ವಕ ತಡೆಯುವುದೆಂದರೇನು ?

ಉತ್ತರ. ಇಲ್ಲಿ "ಕರ್ಮೇಂದ್ರಿಯಾಣಿ" ಎಂಬ ಪದಕ್ಕೆ ಪಾರಿಭಾಷಿಕ ಅರ್ಥವನ್ನು ಗ್ರಹಿಸಬೇಕಾಗಿಲ್ಲ ಆದುದರಿಂದ ಮನುಷ್ಯ ಯಾವುದರ ದ್ವಾರಾ ಬಾಹ್ಯ ಕ್ರಿಯೆಗಳನ್ನು ಮಾಡುತ್ತಾನೋ ಅಂದರೆ ಶಬ್ದಾದಿ ವಿಷಯಗಳನ್ನು ಗ್ರಹಿಸುತ್ತಾನೋ ಆ ಶ್ರೋತ್ರ, ತ್ವಚಾ, ಚಕ್ಷು, ರಸನಾ ಮತ್ತು ಘ್ರಾಣ ಹಾಗೂ ವಾಕ್, ಹಸ್ತ, ಪಾದ, ಪಾಯು ಮತ್ತು ಉಪಸ್ಥ, ಈ ಹತ್ತು ಇಂದ್ರಿಯಗಳಿಗೆ ಕರ್ಮೇಂದ್ರಿಯಗಳೆನ್ನುತ್ತಾರೆ. ಯಾಕೆಂದರೆ ಗೀತೆಯಲ್ಲಿ ಶ್ರೋತ್ರಾದಿ ಐದು ಇಂದ್ರಿಯಗಳಿಗೆ ಎಲ್ಲಿಯೂ ಜ್ಞಾನೇಂದ್ರಿಯಗಳೆಂದು ಹೇಳಿದ್ದು ಕಂಡುಬರುವುದಿಲ್ಲ ಇದಲ್ಲದೆ ಎಲ್ಲಿಯೂ ಕರ್ಮೇಂದ್ರಿಯಗಳೆಂದರೆ ಕೇವಲ ವಾಗಾದಿ ಐದು ಇಂದ್ರಿಯಗಳೆಂದು ಅರ್ಥಮಾಡಿದರೆ ಶ್ರೋತ್ರ ಮತ್ತು ನೇತ್ರಾದಿ ಇಂದ್ರಿಯಗಳನ್ನು ತಡೆಯುವುದೆಂಬ ವಿಷಯವು ಬಾಕಿ ಉಳಿಯುತ್ತದೆ. ಹಾಗೆ ಅದು ಉಳಿಯುವುದರಿಂದ ಮಿಥ್ಯಾಚಾರಿಯ ವೇಷವು ಪೂರ್ಣವಾಗುವುದಿಲ್ಲ. ತಥಾ ವಾಗಾದಿ ಇಂದ್ರಿಯಗಳನ್ನು ತಡೆದು ಶ್ರೋತ್ರಾದಿ ಇಂದ್ರಿಯಗಳಿಂದ ಅವನು ಏನು ಮಾಡುತ್ತಾನೆ ಎಂಬುದನ್ನು ಪ್ರತ್ಯೇಕ ಹೇಳಬೇಕಾಗುತ್ತದೆ ಈ ವಿಷಯವನ್ನು ಎಲ್ಲಿಯೂ ಹೇಳಿಲ್ಲ. ಆದುದರಿಂದ ಕರ್ಮೇಂದ್ರಿಯಾಣಿ ಪದಕ್ಕೆ ಮೇಲಿನಂತೆ ಅರ್ಥ ಮಾಡುವುದು ಉಚಿತವಾಗಿದೆ. ಮುಂದಿನ ಶ್ಲೋಕದಲ್ಲಿಯೂ ಸಹ ಕರ್ಮೇಂದ್ರಿಯಗಳ ದ್ವಾರಾ ಕರ್ಮಯೋಗದ ಆಚರಣೆಯನ್ನು ಮಾಡಲು ಬೋಧಿಸಿದೆ ಕೇವಲ ವಾಣಿ ಮೊದಲಾದ ಐದು ಇಂದ್ರಿಯಗಳಿಂದ ಕರ್ಮೇಂದ್ರಿಯದ ಆಚರಣೆಯು ಪೂರ್ಣವಾಗಲಾರದು ಕರ್ಮಯೋಗದಲ್ಲಿ ಎಲ್ಲಾ ಇಂದ್ರಿಯಗಳ ಅವಶ್ಯಕತೆ ಇರುತ್ತದೆ. ಈ ಎಲ್ಲಾ ಕಾರಣ

ಗಳಿಂದ "ಕರ್ಮೇಂದ್ರಿಯಾಣಿ" ಪದಕ್ಕೆ ಕರ್ಮ ಮಾಡುವ ಎಲ್ಲಾ ಇಂದ್ರಿಯ ಗಳನ್ನು ಗ್ರಹಿಸುವುದು ಉಚಿತವಾಗಿದೆ ಮತ್ತು ಹಠದಿಂದ ಇಂದ್ರಿಯಗಳ ಕ್ರಿಯೆಗಳನ್ನು ತಡೆಯುವುದಕ್ಕೆ ಹಠಪೂರ್ವಕ ತಡೆಯುವುದೆಂದರ್ಥ

ಶಂಕಾ · ಒಬ್ಬಾನೊಬ್ಬ ಸಾಧಕನು ಭಗವದ್ಧ್ಯಾನಕ್ಕಾಗಿ ಇಂದ್ರಿಯ ಗಳನ್ನು ವಶಮಾಡಿಕೊಳ್ಳಲು ಹಠದಿಂದ ಇಂದ್ರಿಯಗಳನ್ನು ವಿಷಯಗಳಿಂದ ತಡೆಯುವ ಚೇಷ್ಟೆಯನ್ನು ಮಾಡುವಾಗ ಅವನ ಮನಸ್ಸು ಸ್ವಾಧೀನದಲ್ಲಿ ಇಲ್ಲದ್ದರಿಂದ ಅದರಿಂದ ವಿಷಯಚಿಂತನೆ ಆಗುವುದಾದರೆ ಅದೂ ಸಹ ಮಿಥ್ಯಾ ಚಾರವೆ ?

ಸಮಾಧಾನ: ಅದು ಮಿಥ್ಯಾಚಾರವಲ್ಲ ಅದೊಂದು ಸಾಧನ. ಯಾಕೆಂದರೆ ಮಿಥ್ಯಾಚಾರಿಯಂತೆ ಮನಸ್ಸಿನಲ್ಲಿ ವಿಷಯ ಚಿಂತನೆ ಮಾಡುವುದು ಅವನ ಉದ್ದೇಶವಲ್ಲ. ಅವನು ಮನಸ್ಸನ್ನು ತಡೆಯಲು ಬಯಸುತ್ತಾನೆ. ಆದರೆ ಸ್ವಭಾವ, ಆಸಕ್ತಿ ಮತ್ತು ಸಂಸ್ಕಾರ ವಶದಿಂದ ಅವನ ಮನಸ್ಸು ಬಲಾತ್ಕಾರ ದಿಂದ ವಿಷಯದ ಕಡೆಗೆ ಹೋಗುತ್ತದೆ ಇದರಿಂದ ಇದು ದೋಷವಲ್ಲ, ಆರಂಭದಲ್ಲಿ ಎಲ್ಲರ ಸ್ಥಿತಿಯೂ ಹೀಗೆಯೇ ಇರುತ್ತದೆ

ಪ್ರಶ್ನೆ: ಇಲ್ಲಿ "ಸಂಯಮ" ಅಂದರೆ "ವಶಮಾಡಿಕೊಳ್ಳುವುದು" ಎಂದರೆ ಬರುವ ಹಾನಿಯೇನು ?

ಉತ್ತರ ಇಂದ್ರಿಯಗಳನ್ನು ವಶಮಾಡಿಕೊಳ್ಳುವವನು ಮಿಥ್ಯಾಚಾರಿ ಯಲ್ಲ. ಯಾಕೆಂದರೆ ಇಂದ್ರಿಯಗಳನ್ನು ವಶಮಾಡಿಕೊಳ್ಳುವುದು ಯೋಗ ಶಾಸ್ತ್ರದ ಒಂದು ಮುಖ್ಯವಾದ ಅಂಗ. ಆದುದರಿಂದ "ಸಂಯಮ್ಯ" ಎಂಬ ಪದಕ್ಕೆ ಮೇಲಿನ ಅರ್ಥವೇ ಸರಿ.

ಪ್ರಶ್ನೆ: "ಇಂದ್ರಿಯಾರ್ಥಾನ್'' ಅಂದರೇನು ?

ಉತ್ತರ: ದಶೇಂದ್ರಿಯಗಳ ಶಬ್ದಾದಿ ಸಮಸ್ತ ವಿಷಯಗಳಿಗೆ ಇಂದ್ರಿ ಯಾರ್ಥಾನ್ ಎನ್ನುತ್ತಾರೆ.

ಪ್ರಶ್ನೆ: "ಅವನು ಮಿಥ್ಯಾಚಾರಿ ಎನಿಸುತ್ತಾನೆ'' ಅಂದರೇನು ?

ಉತ್ತರ: ಉಪರ್ಯುಕ್ತ ಪ್ರಕಾರದಿಂದ ಇಂದ್ರಿಯಗಳನ್ನು ತಡೆದಿರುವ ಮನುಷ್ಯನನ್ನು, ಮೀನುಗಳಿಗೆ ಮೋಸ ಮಾಡುವುದಕ್ಕಾಗಿ ಸ್ಥಿರವಾಗಿ ನಿಂತಿ

ರುವ ಬಕಪಕ್ಷಿಯಂತೆ ಬಾಹ್ಯದಲ್ಲಿ ಒಂದು ಭಾವವನ್ನು ತೋರಿಸುತ್ತಾ ಮನಸ್ಸಿನಲ್ಲಿ ಬೇರೆ ಭಾವವನ್ನು ಇಟ್ಟುಕೊಂಡಿರುತ್ತಾನೆ ಅವನ ಆಚರಣೆಯು ಮಿಥ್ಯೆಯಾದುದರಿಂದ ಅವನು ಮಿಥ್ಯಾಚಾರಿಯೆನಿಸುತ್ತಾನೆ

ಸಂಬಂಧ . ಈ ಪ್ರಕಾರ ಮೇಲೆ ಮೇಲೆ ವಿಷಯಗಳಿಂದ ಇಂದ್ರಿಯಗಳನ್ನು ತಡೆಯುವವನನ್ನು ಮಿಥ್ಯಾಚಾರಿಯೆಂದು ಹೇಳಿ ಮುಂದಿನ ಶ್ಲೋಕದಲ್ಲಿ ಆಸಕ್ತಿಯನ್ನು ತ್ಯಜಿಸಿ ಇಂದ್ರಿಯಗಳಿಂದ ನಿಷ್ಕಾಮ ಭಾವನೆಯಿಂದ ಕರ್ತವ್ಯ ಕರ್ಮವನ್ನು ಮಾಡುವವನನ್ನು ಯೋಗಿ ಎಂದು ಪ್ರಶಂಸೆ ಮಾಡಲಾಗಿದೆ.

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗ ಮಸಕ್ತಃ ಸ ವಿಶಿಷ್ಯತೇ ॥೭॥**

ತಾತ್ಪರ್ಯ : ಅರ್ಜುನನೇ ಕೇಳು. ವಿಷಯಗಳೆಲ್ಲ ಅಶಾಶ್ವತವೆಂದು ತಿಳಿದ ಯಾವನು ಜ್ಞಾನೇಂದ್ರಿಯಗಳನ್ನು ಮನಸ್ಸಿನಿಂದ ತಡೆದು ಕರ್ಮೇಂದ್ರಿಯಗಳಿಂದ ನಿಷ್ಕಾಮ ಕರ್ಮವನ್ನು ಮಾಡುವ ಫಲದ ಬಯಕೆಯಿಲ್ಲದ ಅವನು ಹೆಚ್ಚಿನವನು.

## ವಿವರಣೆ

ಪ್ರ : ಶ್ಲೋಕದಲ್ಲಿರುವ "ತು" ಎಂಬ ಪದಕ್ಕೆ ಅರ್ಥವೇನು ?

ಉ : ಮೇಲೆ ಮೇಲೆ ಕರ್ಮವನ್ನು ಮಾಡುವವರಿಗಿಂತ ಸ್ವರೂಪತಃ ಕರ್ಮವನ್ನು ಮಾಡುತ್ತಿದ್ದು ಇಂದ್ರಿಯಗಳನ್ನು ವಶದಲ್ಲಿ ಇಟ್ಟುಕೊಂಡಿರುವ ಯೋಗಿಯ ವಿಲಕ್ಷಣತೆಯನ್ನು ತೋರಿಸುವುದಕ್ಕಾಗಿ "ತು" ಪದ ಪ್ರಯೋಗವಾಗಿದೆ.

ಪ್ರ : ಶ್ಲೋಕದಲ್ಲಿರುವ "ನಿಯಮ್ಯ" ಪದದ ಅರ್ಥವನ್ನು "ವಶಮಾಡಿಕೊಳ್ಳುವುದು" ಎಂದು ಮಾಡದೆ, "ತಡೆಯುವುದು" ಎಂದು ಮಾಡಿದರೆ ಬರುವ ದೋಷವೇನು ?

ಉ : "ನಿಯಮ್ಯ" ಪದಕ್ಕೆ "ತಡೆಯುವುದು" ಎಂಬ ಅರ್ಥವು ಸರಿಯಲ್ಲ ಯಾಕೆಂದರೆ ಇಂದ್ರಿಯಗಳನ್ನು ತಡೆದ ಮೇಲೆ ಅವನಿಂದ ಕರ್ಮಯೋಗದ ಆಚರಣೆಯು ನಡೆಯುವುದು ಹೇಗೆ ?

ಪ್ರ : ಸಮಸ್ತ ಇಂದ್ರಿಯಗಳ ದ್ವಾರಾ ಕರ್ಮಯೋಗವನ್ನು ಆಚರಿಸ ಬೇಕೆಂದರೆ ಏನು ?

ಉ : ಸಮಸ್ತ ವಿಹಿತ ಕರ್ಮಗಳಲ್ಲಿಯೂ ತಥಾ ಅವುಗಳ ಫಲಗಳಾದ ಇಹಲೋಕ ಮತ್ತು ಪರಲೋಕಗಳ ಸರ್ವಭೋಗಗಳಲ್ಲಿಯೂ ರಾಗ ದ್ವೇಷ ವಿಲ್ಲದೆ ಹಾಗೂ ಸಿದ್ಧಿ–ಅಸಿದ್ಧಿಗಳಲ್ಲಿ ಸಮನಾಗಿದ್ದು ವಶಮಾಡಿಕೊಂಡಿರುವ ಇಂದ್ರಿಯಗಳಿಂದ ಶಬ್ದಾದಿ ವಿಷಯಗಳನ್ನು ಗ್ರಹಿಸುತ್ತಾ ಯಾರು ಯಜ್ಞ, ದಾನ, ತಪ, ಅಧ್ಯಯನ, ಅಧ್ಯಾಪನ, ಪ್ರಜಾಪಾಲನ, ಕೊಡುವ–ತೆಗೆದು ಕೊಳ್ಳುವ ವ್ಯಾಪಾರ ಮತ್ತು ಸೇವೆ ಅಲ್ಲದೆ ಆಹಾರ–ವಿಹಾರ, ನಿದ್ರೆ, ಎಚ್ಚರ, ನಡೆಯುವುದು – ತಿರುಗುವುದು, ಏಳುವುದು – ಕೂಡ್ರುವುದು ಮೊದಲಾದ ಸಮಸ್ತ ಇಂದ್ರಿಯಗಳ ಕರ್ಮಗಳನ್ನು ಶಾಸ್ತ್ರ ವಿಧಿಯಂತೆ ಮಾಡುತ್ತಿರು ವರೋ, ಅವರು ಇದೇ ಕರ್ಮೇಂದ್ರಿಯಗಳಿಂದ ಕರ್ಮಯೋಗವನ್ನು ಆಚರಿಸುವುದು.

ಪ್ರ : "ಸ ವಿಶಿಷ್ಯತೆ" ಎಂದರೇನು ? ಹಿಂದಿನ ಶ್ಲೋಕದಲ್ಲಿ ಹೇಳಿದ ಮಿಥ್ಯಾಚಾರಿಗಿಂತ ಹೆಚ್ಚಿನವನೆಂದು ಹೇಳಬೇಕೆ ?

ಉ : "ಸ ವಿಶಿಷ್ಯತೆ" ಅವನು ಹೆಚ್ಚಿನವನು ಅಂದರೆ ಕರ್ಮಯೋಗಿಯು, ಸಮಸ್ತ ಸಾಧಾರಣ ಮನುಷ್ಯನಿಗಿಂತ ಶ್ರೇಷ್ಠನೆಂದು ಹೇಳಿ ಅವನನ್ನು ಪ್ರಶಂಸೆ ಮಾಡಿದೆ. ಹಿಂದೆ ಹೇಳಿದ ಮಿಥ್ಯಾಚಾರಿಗಿಂತ ಶ್ರೇಷ್ಠನು ಎಂದು ತಿಳಿಯ ಬಾರದು. ಯಾಕೆಂದರೆ ಮಿಥ್ಯಾಚಾರಿಯು ಅಸುರೀ ಸಂಪತುಳ್ಳ ಡಾಂಭೀ ಪುರುಷನು ; ಅವನಿಗಿಂತ ಸಕಾಮ ಕರ್ಮವನ್ನು ಮಾಡುವವನು ಶ್ರೇಷ್ಠನು. ಹೀಗಿರುವಾಗ ದೈವೀ ಸಂಪತ್ತಿನ ಕರ್ಮಯೋಗಿಯು ಮಿಥ್ಯಾಚಾರಿಗಿಂತ ಶ್ರೇಷ್ಠನು ಎಂದು ಹೇಳುವುದೆಂದರೆ ವೇಶ್ಯಾ ಸ್ತ್ರೀಗಿಂತ ಸತಿಯು ಶ್ರೇಷ್ಠಳೆಂದು ಹೇಳುವಂತೆ ಕರ್ಮಯೋಗಿಯ ಸ್ತುತಿಯಲ್ಲಿ ನಿಂದೆಯೇ ಎಂದು ತಿಳಿಯಬೇಕು.

ಸಂಬಂಧ : ತಾವು ನನ್ನನ್ನು ಘೋರ ಕರ್ಮದಲ್ಲಿ ಏಕೆ ತೊಡಗಿಸುವಿರಿ ಎಂದು ಅರ್ಜುನನು ಕೇಳಲು ಅದಕ್ಕೆ ಉತ್ತರವಾಗಿ ಮೇಲೆ ಮೇಲೆ ಕರ್ಮವನ್ನು ತ್ಯಾಗ ಮಾಡಿದವನು ಮಿಥ್ಯಾಚಾರಿಯೆಂದು ನಿಂದಿಸಿ ನಂತರ ಕರ್ಮಯೋಗ

ವನ್ನು ಹೊಗಳಿ ಈ ಮುಂದಿನ ಶ್ಲೋಕದಲ್ಲಿ ಅರ್ಜುನನಿಗೆ ಕರ್ಮ ಮಾಡಲು ಆಜ್ಞಾಪಿಸಲ್ಪಡುತ್ತದೆ.

**ನಿಯತಂ ಕುರು ಕರ್ಮತ್ವಂ ಕರ್ಮಜ್ಯಾಯೋ ಹ್ಯ ಕರ್ಮಣಃ ।**
**ಶರೀರಯಾತ್ರಾಪಿ ಚ ತೇ ನ ಪ್ರಸಿಧ್ಯೇದಕರ್ಮಣಃ ॥೮॥**

ತಾತ್ಪರ್ಯ: ನೀನು ನಿಯತವಾದ ಕರ್ಮವನ್ನು ಮಾಡು. ಏಕೆಂದರೆ ಏನನ್ನೂ ಮಾಡುವುದಿಲ್ಲವೆಂದು ಕುಳಿತುಕೊಳ್ಳುವುದಕ್ಕಿಂತ ಮಾಡುವುದು ಒಳ್ಳೆಯದು. ಹೇಗೆಂದರೆ– ಯುದ್ಧವನ್ನು ಬಿಟ್ಟರೂ ಭಿಕ್ಷಾಚರಣೆಯನ್ನಾದರೂ ಮಾಡುತ್ತೇನೆಂದು ನೀನೇ ಹೇಳುವೆ. ಹಾಗೆ ಹೇಳುವುದು ಸರಿ, ಯಾಕೆಂದರೆ ಯಾವ ಕರ್ಮವನ್ನೂ ಮಾಡದೆ ಇದ್ದರೆ ಶರೀರವನ್ನು ಇಟ್ಟುಕೊಂಡಿರುವಿಕೆಯೂ ಸಹ ಸಾಧ್ಯವಾಗಲಾರದು.

## ವಿವರಣೆ

ಪ್ರ: ಮೇಲಿನ ಶ್ಲೋಕದಲ್ಲಿ "ನಿಯತಮ್" ಎಂಬ ವಿಶೇಷಣ ಸಹಿತವಾದ "ಕರ್ಮ" ಪದ ಯಾವ ಕರ್ಮವನ್ನು ಬೋಧಿಸುತ್ತದೆ? ಅದನ್ನು ಮಾಡಲು ಆಜ್ಞಾಪಿಸುವ ಅಭಿಪ್ರಾಯವೇನು?

ಉ: ವರ್ಣ, ಆಶ್ರಮ, ಸ್ವಭಾವ ಮತ್ತು ಪರಿಸ್ಥಿತಿಯಂತೆ ಯಾವನಿಗೆ ಯಾವ ಕರ್ಮವನ್ನು ಶಾಸ್ತ್ರವು ಬೋಧಿಸುವುದೋ ಆ ಶಾಸ್ತ್ರ ವಿಹಿತ ಸ್ವಧರ್ಮ ರೂಪ ಕರ್ತವ್ಯ ಕರ್ಮಕ್ಕೆ "ನಿಯತ ಕರ್ಮ" ಎಂದು ಹೆಸರು. ಅದನ್ನು ಮಾಡಲು ಆಜ್ಞಾಪಿಸಿ ಶ್ರೀಕೃಷ್ಣನು ಅರ್ಜುನನಿಗುಂಟಾದ ಭ್ರಮೆಯನ್ನು ನಿವಾರಿಸಿದನು.

ಪ್ರ: ಅರ್ಜುನನಿಗುಂಟಾದ ಭ್ರಮೆಯೇನು?

ಉ: ಶ್ರೀಕೃಷ್ಣನ ಮಾತುಗಳು ಸ್ಪಷ್ಟವಾಗಿಲ್ಲದೆ "ವ್ಯಾಮಿಶ್ರ" ಯಾಗಿರುವುವೆಂಬುದೇ ಭ್ರಮೆ.

ಅಭಿಪ್ರಾಯವೇನೆಂದರೆ– ನಿನ್ನ ಜಿಜ್ಞಾಸೆಗೆ ಅನುಸಾರ ನಾನು ನಿನಗೆ ನಿನ್ನ ನಿಶ್ಚಿತವಾದ ಕರ್ತವ್ಯವನ್ನು ಬೋಧಿಸಿರುತ್ತೇನೆ. ಈ ಕಾರಣದಿಂದ

ಯಾವ ರೀತಿಯಿಂದಲೂ ಕರ್ಮಾಧಿಕಾರಿಯಾದ ನೀನು ಕರ್ಮವನ್ನು ಸ್ವರೂಪತಃ ತ್ಯಜಿಸುವುದು ಯೋಗ್ಯವಲ್ಲ. ನೀನು ಶಾಸ್ತ್ರವಿಹಿತ ಕರ್ತವ್ಯ ಕರ್ಮವನ್ನು ಅವಶ್ಯವಾಗಿ ಆಚರಿಸಲೇ ಬೇಕು ಯುದ್ಧವು ನಿನಗೆ ಸ್ವಧರ್ಮ; ಅದು ನೋಡುವುದಕ್ಕೆ ಹಿಂಸತಾಪೂರ್ಣ ಹಾಗೂ ಕ್ರೂರತಾಪೂರ್ಣವಾಗಿ ಕಂಡುಬಂದರೂ ಅದು ನಿನಗೆ ಘೋರ ಕರ್ಮವಲ್ಲ ಅದನ್ನು ನೀನು ನಿಷ್ಕಾಮ ಭಾವದಿಂದ ಮಾಡಿದ್ದಾದರೆ ಅದೇ ಚಿತ್ತಶುದ್ಧಿಯ ಮೂಲಕ ಮೋಕ್ಷಕ್ಕೆ ಕಾರಣವಾಗುತ್ತದೆ ಆದುದರಿಂದ ನೀನು ಸಂಶಯರಹಿತನಾಗಿ ಯುದ್ಧ ಮಾಡಲು ಸಿದ್ಧನಾಗು.

ಪ್ರ : ಕರ್ಮವನ್ನು ಮಾಡದೆ ಇರುವುದಕ್ಕಿಂತ ಕರ್ಮ ಮಾಡುವುದು ಉತ್ತಮವೆಂಬುದರ ಭಾವವೇನು ?

ಉ . ಅರ್ಜುನನು ಭ್ರಾಂತಿಯಿಂದ ಶ್ರೀಕೃಷ್ಣನ ಮತದಲ್ಲಿ ಕರ್ಮ ಮಾಡುವುದಕ್ಕಿಂತ ಮಾಡದೆ ಇರುವುದು ಶ್ರೇಷ್ಠವೆಂದು ತಿಳಿದಿದ್ದನು. ಈ ಭ್ರಮೆಯನ್ನು ಬಿಡಿಸುವುದಕ್ಕಾಗಿ ಶ್ರೀಕೃಷ್ಣನು ಕರ್ಮವನ್ನು ಮಾಡದೆ ಇರುವುದಕ್ಕಿಂತ ಕರ್ಮ ಮಾಡುವುದು ಶ್ರೇಷ್ಠವೆಂದು ಹೇಳಿದ್ದಾನೆ. ಯಾಕೆಂದರೆ ಕರ್ತವ್ಯ ಕರ್ಮವನ್ನು ಮಾಡುವುದರಿಂದ ಮನುಷ್ಯನ ಅಂತಃಕರಣವು ಶುದ್ಧಿಯಾಗುತ್ತದೆ. ಪಾಪವೆಲ್ಲವೂ ನಾಶವಾಗುತ್ತದೆ. ಇದಕ್ಕೆ ವಿರುದ್ಧವಾಗಿ ಕರ್ತವ್ಯ ಕರ್ಮವನ್ನು ತ್ಯಜಿಸುವುದರಿಂದ ಪಾಪಕ್ಕೆ ಭಾಗಿಯಾಗುವುದಲ್ಲದೆ, ನಿದ್ರಾ, ಆಲಸ್ಯ, ಪ್ರಮಾದಗಳಿಗೆ ಸಿಕ್ಕಿ ಅಧೋಗತಿಗೆ ಹೋಗಬೇಕಾಗುತ್ತದೆ. ಈ ಕಾರಣದಿಂದ ಕರ್ಮವನ್ನು ಮಾಡದೆ ಇರುವುದಕ್ಕಿಂತ ಕರ್ಮ ಮಾಡುವುದು ಉತ್ತಮವೆಂಬುದು ಸ್ಪಷ್ಟವಾಗಿದೆ. ಸಕಾಮ ಭಾವದಿಂದಲೇ ಆಗಲಿ ಇಲ್ಲವೆ ಪ್ರಾಯಶ್ಚಿತ್ತಕ್ಕಾಗಿಯೇ ಆಗಲಿ, ಮಾಡದಿರುವುದಕ್ಕಿಂತ ಮಾಡುವುದು ಮೇಲು

ಪ್ರ : ಕರ್ಮವನ್ನು ಮಾಡದೆ ಇದ್ದರೆ ಶರೀರ ನಿರ್ವಾಹವೂ ಸಿದ್ಧಿಸಲಾರದು ಎಂದರೇನು ?

ಉ · ಮನುಷ್ಯನು ಸರ್ವಥಾ ಕರ್ಮವನ್ನು ತ್ಯಜಿಸಿ ಜೀವಿಸಲಾರನು. ಶರೀರ ನಿರ್ವಾಹಕ್ಕಾಗಿ ಅವನು ಏನನ್ನಾದರೂ ಮಾಡಲೇಬೇಕು. ಈ ಪರಿಸ್ಥಿ

ಎಲ್ಲಿ ವಿಹಿತ ಕರ್ಮಗಳನ್ನು ತ್ಯಜಿಸುವುದರಿಂದ ಮನುಷ್ಯನು ಪತನವಾಗುವ ಸಂಭವವಿರುತ್ತದೆ ಆದುದರಿಂದ ಮನುಷ್ಯನು ಕರ್ಮ ಮಾಡದೆ ಇರುವುದಕ್ಕಿಂತ ಮಾಡುವುದೇ ಮೇಲು

ಸಂಬಂಧ ''ಕರ್ಮಣಾಬದ್ಧ್ಯತೆ ಜಂತು" ಎಂದು ಶಾಸ್ತ್ರವು ಹೇಳಿದಂತೆ ಕರ್ಮಗಳು ಬಂಧನಕಾರಿಗಳು ಎಂಬ ಶಂಕೆಗೆ ಕೆಳಗಿನ ಶ್ಲೋಕದಲ್ಲಿ ಸಮಾಧಾನ ಹೇಳಿದೆ.

**ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ ।**
**ತದರ್ಥಂ ಕರ್ಮಕೌಂತೇಯ ಮುಕ್ತಸಂಗಃ ಸಮಾಚರ ॥೯॥**

ತಾತ್ಪರ್ಯ : ಯಜ್ಞಪುರುಷನಾದ ಪರಮಾತ್ಮನ ಪ್ರೀತ್ಯರ್ಥವಾಗಿ ಮಾಡುವ ಕರ್ಮಗಳನ್ನು ಬಿಟ್ಟರೆ ಉಳಿದ ದೇಹೇಂದ್ರಿಯಾದಿಗಳ ಹಿತಾರ್ಥವಾಗಿ ಮಾಡುವ ಸಂದರ್ಭದಲ್ಲಿ ಈ ಲೋಕವು ಕರ್ಮದ ಕಟ್ಟಿಗೆ ಒಳಪಟ್ಟಿದೆ. ಯಜ್ಞಪುರುಷನ ಪ್ರೀತ್ಯರ್ಥವಾಗಿ ಮಾಡಿದ ಕರ್ಮಗಳು ಬಂಧಕವಲ್ಲ. ಆದ್ದರಿಂದ ಕೌಂತೇಯನೇ ಕೇಳು ಫಲದ ಬಯಕೆಯನ್ನು ಬಿಟ್ಟು ಆ ಯಜ್ಞ ಪುರುಷನ ಪ್ರೀತ್ಯರ್ಥವಾಗಿ ಕರ್ಮವನ್ನು ನೆರವೇರಿಸು

## ವಿವರಣೆ

ಪ್ರ : ಯಜ್ಞಕ್ಕಾಗಿ ಮಾಡಲ್ಪಡುವ ಕರ್ಮಗಳಿಂದ ಅತಿರಿಕ್ತವಾಗಿ ಬೇರೆ ಕರ್ಮಗಳಲ್ಲಿ ತೊಡಗಿರುವ ಮನುಷ್ಯ ಸಮುದಾಯವು ಕರ್ಮಗಳ ಬಂಧನಕ್ಕೆ ಬೀಳುತ್ತದೆ – ಅಂದರೇನು ?

ಉ : ಯಾವ ಕರ್ಮವು ಪರಮೇಶ್ವರ ಪ್ರೀತ್ಯರ್ಥವಾಗಿ ಯಾವ ಫಲದ ಅಪೇಕ್ಷೆಯೂ ಇಲ್ಲದೆ ಮಾಡಲ್ಪಡುತ್ತದೋ ಆ ಕರ್ಮವು ಬಂಧನಕಾರಿಯಲ್ಲ ಈ ಕರ್ಮದಿಂದ ಮನುಷ್ಯನ ಅಂತಃಕರಣವು ಶುದ್ಧವಾಗಿ ಜ್ಞಾನಕ್ಕೆ ಅಧಿಕಾರಿಯಾಗುತ್ತಾನೆ. ಇದಕ್ಕಿಂತ ವಿಪರೀತವಾದ ಕರ್ಮಗಳೆಲ್ಲವೂ ಬಂಧನಕಾರಿಗಳೇ ; ಅಂದರೆ ಕರ್ಮಗಳನ್ನು ಶಿವಾರ್ಪಣ ಬುದ್ಧಿಯಿಂದ ಮಾಡಬೇಕು , ಶವಾರ್ಪಣ ಬುದ್ಧಿಯಿಂದ ಮಾಡಬಾರದು.

ಪ್ರ: ಬಂಧನ ಅಂದರೇನು ?

ಉ: ಮನುಷ್ಯನು ಸ್ವಾರ್ಥಬುದ್ಧಿಯಿಂದ ಮಾಡಿದ ಶುಭಾಶುಭ ಕರ್ಮಗಳ ಫಲವನ್ನು ಭೋಗಿಸುವುದಕ್ಕಾಗಿ ಕರ್ಮಾನುಸಾರ ನಾನಾ ಯೋನಿಗಳಲ್ಲಿ ಹುಟ್ಟಬೇಕಾಗುತ್ತದೆ ಜನನ-ಮರಣದ ಸುಳಿಯಲ್ಲಿ ಸಿಕ್ಕಿಬೀಳುವುದೇ ಬಂಧನ; ಆದುದರಿಂದ ಮನುಷ್ಯನು ಈ ಕರ್ಮ ಬಂಧನವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಈಶ್ವರಾರ್ಪಣ ಬುದ್ಧಿಯಿಂದ ವಿಹಿತ ಕರ್ಮಗಳನ್ನು ಆಚರಿಸಬೇಕು

ಪ್ರ: ಈ ಶ್ಲೋಕದಲ್ಲಿರುವ "ಅಯಂಲೋಕಃ" ಅಂದರೇನು ?

ಉ: ಕರ್ಮ ಮಾಡಲು ಮನುಷ್ಯನಿಗೆ ಅಧಿಕಾರವಿದೆ ಹಾಗೂ ಮನುಷ್ಯ ಯೋನಿಯಲ್ಲಿ ಮಾಡಲ್ಪಟ್ಟ ಕರ್ಮಗಳ ಫಲಭೋಗಕ್ಕಾಗಿಯೇ ಇತರೆ ಯೋನಿಗಳು ಪ್ರಾಪ್ತವಾಗುತ್ತವೆ, ಇತರೆ ಯೋನಿಗಳಲ್ಲಿ ಪುಣ್ಯ-ಪಾಪರೂಪವಾದ ಹೊಸ ಕರ್ಮಗಳ ಸಂಭವವಿಲ್ಲ ಅಂದರೆ ಅನ್ಯಯೋನಿಗಳಲ್ಲಿ ಮಾಡಿದ ಕರ್ಮಗಳು ಬಾಧಿಸುವುದಿಲ್ಲ ಕೇವಲ ಮನುಷ್ಯ ಯೋನಿಗಳಲ್ಲಿ ಮಾಡಿದ ಕರ್ಮಗಳೇ ಬಂಧನಕ್ಕೆ ಕಾರಣವಾಗುತ್ತವೆ ಈ ಅಭಿಪ್ರಾಯದಿಂದಲೇ "ಅಯಂ ಲೋಕಃ" ಪದ ಪ್ರಯೋಗವಾಗಿದೆ.

ಪ್ರ: "ನೀನು ಆಸಕ್ತಿಯನ್ನು ಬಿಟ್ಟು ಯಜ್ಞಕ್ಕಾಗಿ ಸರಿಯಾದ ರೀತಿಯಿಂದ ಕರ್ತವ್ಯ ಕರ್ಮವನ್ನು ಮಾಡು" ಅಂದರೇನು ?

ಉ. ಅನಾಸಕ್ತ ಭಾವದಿಂದ ಈಶ್ವರನಿಗಾಗಿ ಮಾಡುವ ಕರ್ಮಗಳು ಬಂಧನವನ್ನುಂಟುಮಾಡುವುದಿಲ್ಲ. ಈ ರೀತಿಯಿಂದ ಮಾಡಿದ ಮನುಷ್ಯನ ಪೂರ್ವಸಂಚಿತ ಪಾಪ-ಪುಣ್ಯಗಳೂ ಸಹ ವಿಲೀನವಾಗುತ್ತವೆ.

ಪ್ರ: ಉಪಯುಕ್ತ ವಾಕ್ಯದಲ್ಲಿ "ಮುಕ್ತಸಂಗಃ" ವಿಶೇಷಣದ ಅಭಿಪ್ರಾಯವೇನು ?

ಉ "ಮುಕ್ತಸಂಗಃ" – ಈ ವಿಶೇಷಣದಿಂದ ಕರ್ಮಫಲಗಳಲ್ಲಿಯೂ ಮಮತಾ ಮತ್ತು ಆಸಕ್ತಿಯನ್ನು ತ್ಯಜಿಸಿ ಕರ್ಮಮಾಡಲು ಹೇಳಿದೆ. ಅರ್ಥಾತ್ ಕರ್ಮಗಳ ಫಲವನ್ನು ಬಿಡುವುದರ ಜೊತೆಗೆ ಕರ್ತೃತ್ವ ಬುದ್ಧಿಯನ್ನೂ ಸಹ ಬಿಡಬೇಕೆಂದರ್ಥ

ಪ್ರ "ಯಜ್ಞ"ವೆಂಬ ಮಾತಿಗೆ ಪರಮೇಶ್ವರನೆಂದರ್ಥ – ಎಂಬುದಕ್ಕೆ ಪ್ರಮಾಣವೇನು ?

ಉ· ಯಜ್ಞವೆಂಬ ಮಾತಿಗೆ ವೇದದಲ್ಲಿ ಹೇಳಿರುವ ಯಜ್ಞವೆಂಬ ಕರ್ಮವೆಂದು ಸಹಜವಾದ ಅರ್ಥವಾಗುತ್ತಿದ್ದರೂ ಆ ಅರ್ಥವು ಇಲ್ಲಿ ಹೊಂದುವುದಿಲ್ಲ. ಏಕೆಂದರೆ ಇಲ್ಲಿ ಯಜ್ಞಕ್ಕೋಸ್ಕರ ಮಾಡುವ ಕರ್ಮಗಳ ಹೊರತು ಉಳಿದ ಕರ್ಮಗಳೆಲ್ಲ ಬಂಧಕಗಳೆಂದರ್ಥವಿದೆ. ಯಜ್ಞವೇ ಕರ್ಮವಾದ್ದರಿಂದ ಯಜ್ಞವೆಂಬ ಮಾತಿನ ಸರ್ವಸಾಮಾನ್ಯವಾದ ಅರ್ಥಕ್ಕೆ ಇಲ್ಲಿ ಅವಕಾಶವಿಲ್ಲ. "ಯಜ್ಞೋ ಯಜ್ಞಪತಿರ್ಯಜ್ವಾ ಯಜ್ಞಾಂಗೋ ಯಜ್ಞವಾಹನಃ" ಎಂಬ ವಿಷ್ಣುಸಹಸ್ರನಾಮದಂತೆ ಯಜ್ಞಶಬ್ದವು ಪರಮಾತ್ಮನ ಹೆಸರಾಗಿರುವುದು· "ಯಜ್ಞೋ ವೈವಿಷ್ಣುಃ" ಎಂಬ ಶೃತಿಯೂ ಪ್ರಮಾಣ (ತೈ.ಶೃ).

ಸಂಬಂಧ : ಇದೂ ಅಲ್ಲದೆ ಭಗವಂತನಾದ ಪ್ರಜಾಪತಿಯ ವಚನದಿಂದಲೂ ಈ ಅಧಿಕಾರಿಯು ಕರ್ಮವನ್ನೇ ಮಾಡುವುದಕ್ಕೆ ಯೋಗ್ಯವೆಂದು ಮುಂದಿನ ನಾಲ್ಕು ಶ್ಲೋಕಗಳಲ್ಲಿ ಪ್ರತಿಪಾದಿಸಲ್ಪಡುತ್ತದೆ.

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷವೋಽಸ್ತ್ವಿಷ್ಟ ಕಾಮಧುಕ್ ॥೧೦॥**

ಈ ಶ್ಲೋಕದಲ್ಲಿ ಬ್ರಹ್ಮದೇವನಿಂದ ಹೇಳಲ್ಪಟ್ಟ ಶ್ರೇಯಸ್ಸಿಗೆ ಸಾಧಕವಾದ ಯಜ್ಞಗಳು ಶ್ರೇಷ್ಠವಾದುದರಿಂದ ಮಾಡಬೇಕು, ಮಾಡದೆ ಹೋದರೆ ಪಾಪವು ಸಂಭವಿಸುತ್ತದೆ.

ಈಶ್ವರ ಪ್ರೀತ್ಯರ್ಥವಾಗಿ ಮಾಡುವ ಬೇರೆ ಬೇರೆ ಕರ್ಮಗಳನ್ನು ಮಾಡುವ ಅಧಿಕಾರಿಗಳಾದಂಥ ಜನರನ್ನು ಹುಟ್ಟಿಸಿ ಸೃಷ್ಟಿಕರ್ತನಾದ ಬ್ರಹ್ಮನು ಹುಟ್ಟಿಸಿದ ಕಾಲದಲ್ಲಿಯೇ ಹೇಳಿದನು. ಏನೆಂದರೆ– ಈ ಕರ್ಮಗಳಿಂದ ಏಳಿಗೆಯನ್ನು ಹೊಂದಿರಿ. ಈ ಕರ್ಮವು ನಿಮಗೆ ಬೇಕೆನಿಸಿದ ಬಯಕೆಗಳನ್ನೆಲ್ಲ ಕೊಡುವಂಥದ್ದಾಗಲಿ.

**ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ |**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ || ೧೧ ||**

**ತಾ :** ಈ ಪ್ರಪಂಚವು ಆ ದಾನ ಪ್ರಧಾನವಾದ ಒಂದು ಸಂಸ್ಥೆ ಒಂದು ಮರಕ್ಕೆ ನಾವು ನೀರನ್ನು ಹಾಕಿದರೆ ಅದು ನಮಗೆ ಫಲವನ್ನು ಕೊಡುತ್ತದೆ ಈ ವಿಷಯವನ್ನರಿತು ವರ್ತಿಸಿದರೆ ಸಂಸಾರವೇ ಸ್ವರ್ಗ; ಇದನ್ನೇ ಈ ಶ್ಲೋಕವು ಪ್ರತಿಪಾದಿಸುತ್ತದೆ. ಈ ಕರ್ಮದಿಂದ ಇಂದ್ರನೇ ಮೊದಲಾದ ದೇವತೆಗಳನ್ನು ಸಂತೋಷಗೊಳಿಸಿರಿ ನಿಮ್ಮಿಂದ ಸಂತುಷ್ಟರಾದ ಆ ದೇವತೆಗಳು ನಿಮ್ಮನ್ನು ನಿಮಗೆ ಬೇಕಾದ ಮಳೆಬೆಳೆಗಳನ್ನು ಕೊಟ್ಟು ಸಂತೋಷಗೊಳಿಸಲಿ ಒಬ್ಬರಿಗೊಬ್ಬರು ಸಂತೋಷಗೊಳಿಸುವವರಾಗಿ ಚಿತ್ತಶುದ್ಧಿಯನ್ನೂ ಜ್ಞಾನವನ್ನೂ ಪಡೆಯುವುದರ ಮೂಲಕ ಮೋಕ್ಷ ರೂಪವಾದ ಶ್ರೇಯಸ್ಸನ್ನು ಪಡೆಯಿರಿ

**ಇಷ್ಟಾನ್ಭೋಗಾನ್ಹಿ ವೋ ದೇವಾ ದಾಸ್ಯಂತೇ ಯಜ್ಞ ಭಾವಿತಾಃ |**
**ತೈರ್ದತ್ತಾನ ಪ್ರದಾಯೈಭ್ಯೋ ಯೋ ಭುಂಕ್ತೇಸ್ತೇನ ಏವ ಸಃ || ೧೨ ||**

**ತಾ.** ಬೇರೆ ಬೇರೆ ಕರ್ಮಗಳಿಂದ ಸಂತೋಷಗೊಂಡಂಥ ಇಂದ್ರನೇ ಮೊದಲಾದ ದೇವತೆಗಳು ನಿಮಗೆ ಬೇಕೆನಿಸಿದಂಥ ಹೆಂಡತಿ, ಮಕ್ಕಳು, ಐಶ್ವರ್ಯ ಮೊದಲಾದ ಸುಖ ಸಾಧನಗಳನ್ನು ಕೊಡುತ್ತಾರಷ್ಟೆ ! ಆದ್ದರಿಂದ ಆ ಇಂದ್ರನೇ ಮೊದಲಾದ ದೇವತೆಗಳಿಂದ ಕೊಡಲ್ಪಟ್ಟ ಸುಖ ಸಾಧನಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಅವರಿಗೆ ಸಾಲವನ್ನು ತೀರಿಸಿದಂತೆ ಹೋಮಗಳ ರೂಪವಾಗಿ ಕೊಡದೆ ಯಾವನು ತನ್ನ ದೇಹೇಂದ್ರಿಯಾದಿಗಳನ್ನು ಮಾತ್ರವೇ ತೃಪ್ತಿಪಡಿಸಿಕೊಳ್ಳುತ್ತಾನೋ ಅವನು ದೇವತೆಗಳ ಸ್ವತ್ತನ್ನು ಅಪಹರಿಸಿದ ಕಳ್ಳನೇ ಸರಿ.

ಈ ತಪ್ಪಿನಿಂದ ತಪ್ಪಿಸಿಕೊಳ್ಳಲು ಏನು ಮಾಡಬೇಕು ಅಂದರೆ —

**ಯಜ್ಞ ಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವ ಕಿಲ್ಬಿಷೈಃ |**
**ಭುಂಜತೇ ತೇ ತ್ವಘಂ ಪಾಪಾಯೇ ಪಚಂತ್ಯಾತ್ಮ ಕಾರಣಾತ್ || ೧೩ ||**

ತಾ ಯಾವ ಮನುಷ್ಯನು ಯಜ್ಞದ ಶೇಷಾನ್ನವನ್ನು ತಿನ್ನುವನೋ ಅವನು ಸರ್ವ ಪಾಪಗಳಿಂದ ಬಿಡಲ್ಪಡುವನು. ಮತ್ತೆ ಯಾವ ಪಾಪಾತ್ಮನು ಕೇವಲ ತನಗೋಸ್ಕರವೇ ಅನ್ನವನ್ನು ಬೇಯಿಸುವನೋ, ಅವನು ಪಾಪವನ್ನೇ ತಿನ್ನುತ್ತಾನೆ.

## ವಿವರಣೆ

ಪ್ರ . "ಯಜ್ಞ ಶಿಷ್ಟಾಶಿನಃ" ಅಂದರೆ ಯಾರು ?

ಉ: "ಯಜ್ಞ" ಶಬ್ದವು ಪಂಚ ಮಹಾಯಜ್ಞಗಳನ್ನು ಬೋಧಿಸುತ್ತದೆ ಕ್ರಿಯೆಗಳಿಂದ ಸಂಪನ್ನವಾಗಬಹುದಾದ ಎಲ್ಲಾ ಶಾಸ್ತ್ರೀಯ ಸತ್ಕರ್ಮಗಳನ್ನೂ ಯಜ್ಞವೆಂದು ಹೇಳಬಹುದು ಸೃಷ್ಟಿ ಕಾರ್ಯವು ಸುಚಾರು ರೂಪದಿಂದ ಸಂಚಾಲನೆಯಾಗಬೇಕಾದರೆ ಐದು ಪ್ರಕಾರದ ಪ್ರಾಣಿಗಳ ಪರಸ್ಪರ ಸಂಬಂಧವಿರುತ್ತದೆ ದೇವತಾ, ಋಷಿ, ಪಿತರ, ಮನುಷ್ಯ ಮತ್ತು ಅನ್ಯ ಪ್ರಾಣಿ – ಇವೇ ಐದು ಪ್ರಾಣಿಗಳು ಈ ಐದರ ಸಹಯೋಗದಿಂದಲೇ ಎಲ್ಲರ ಪುಷ್ಟಿಯಾಗುತ್ತದೆ. ದೇವತೆಗಳು ಸಮಸ್ತ ಸಂಸಾರಕ್ಕೆ ಇಷ್ಟಭೋಗವನ್ನು ಕೊಡುತ್ತಾರೆ. ಋಷಿ – ಮಹರ್ಷಿಗಳು ಎಲ್ಲರಿಗೂ ಜ್ಞಾನ ಕೊಡುತ್ತಾರೆ. ಪಿತೃಗಳು ಸಂತಾನವನ್ನು ಪೋಷಿಸುತ್ತಾರೆ; ಮತ್ತು ಹಿತವನ್ನು ಬಯಸುತ್ತಾರೆ. ಮನುಷ್ಯನು ಕರ್ಮ ದ್ವಾರ ಎಲ್ಲರ ಸೇವೆಯನ್ನೂ ಮಾಡುತ್ತಾನೆ. ಮತ್ತು ಪಶು, ಪಕ್ಷಿ ಹಾಗೂ ವೃಕ್ಷಾದಿಗಳು ಎಲ್ಲರ ಸುಖ ಸಾಧನಕ್ಕಾಗಿ ತಮ್ಮನ್ನು ಸಮರ್ಪಿಸುತ್ತವೆ ಈ ಐದರಲ್ಲಿ ಯೋಗ್ಯತಾ, ಅಧಿಕಾರ ಮತ್ತು ಸರ್ವ ಸಾಧನ ಸಂಪನ್ನರಾದುದರಿಂದ ಎಲ್ಲರ ಪುಷ್ಟಿಯ ಜವಾಬ್ದಾರಿಯೂ ಮನುಷ್ಯನ ಮೇಲೆ ಇದೆ. ಇದರಿಂದ ಮನುಷ್ಯನು ಶಾಸ್ತ್ರೀಯ ಕರ್ಮದಿಂದ ಎಲ್ಲರ ಸೇವೆಯನ್ನು ಮಾಡಲೇಬೇಕು ಪಂಚ ಮಹಾಯಜ್ಞಗಳೆಂದರೆ ಲೋಕಸೇವಾರೂಪ ಶಾಸ್ತ್ರೀಯ ಸತ್ಕರ್ಮಗಳೆಂದು ತಿಳಿಯಬೇಕು· ಮನುಷ್ಯನು ಏನನ್ನು ಸಂಪಾದನೆ ಮಾಡುತ್ತಾನೋ ಅದನ್ನೆಲ್ಲ ಮೇಲೆ ಹೇಳಿದ ಐದು ತರಗತಿಯವರ ಸಹಯೋಗದಿಂದಲೇ ಸಂಪಾದಿಸಬೇಕು ಇದರಿಂದ ಯಜ್ಞ ಮಾಡಿದ ಮೇಲೆ ಉಳಿದ ಅನ್ನವನ್ನು ಅಂದರೆ ಎಲ್ಲರಿಗೆ ಅವರವರ ಭಾಗವನ್ನು ಸಮರ್ಪಿಸಿ ಶೇಷವನ್ನು ಸ್ವೀಕರಿಸುವವರನ್ನು "ಯಜ್ಞ

ಶಿಷ್ಟಾಶಿನಃ" ಅಥವಾ "ಅಮೃತಾಶೀ" ಅಂದರೆ ಅಮೃತವನ್ನು ಭೋಗಿಸುವವನು ಎನ್ನುತ್ತಾರೆ. ಹೀಗೆ ಮಾಡದೆ ಕೇವಲ ಮತ್ತೊಬ್ಬರ ಸ್ವತ್ತನ್ನು ಅಪಹರಿಸಿ ತನಗಾಗಿಯೇ ಸಂಪಾದಿಸುವವನು ಪಾಪವನ್ನೇ ಸಂಪಾದಿಸುತ್ತಾನೆಂದರ್ಥ. ಪಾಪವನ್ನೇ ತಿನ್ನುತ್ತಾನೆಂದರ್ಥ. ತಾನು ಸಂಪಾದಿಸಿದ್ದನ್ನು – ಅವರವರ ಭಾಗವನ್ನು ಅವರವರಿಗೆ ಸಮರ್ಪಿಸಿ – ಉಳಿದದ್ದನ್ನು ತಾನು ಭೋಗಿಸುವವನೇ "ಯಜ್ಞ ಶಿಷ್ಟಾಶಿನಃ" ಎಂದು ಹೇಳಿಸಿಕೊಳ್ಳುತ್ತಾನೆ

ಪ್ರಶ್ನೆ "ಸಂತಃ" ಪದವು ಸಾಧಕರ ವಾಚಕವೇ, ಸಿದ್ಧರ ವಾಚಕವೇ ?

ಉ ಇದು ಸಾಧಕರ ವಾಚಕ. ಯಾಕೆಂದರೆ ಸಿದ್ಧಪುರುಷರಲ್ಲಿ ಪಾಪವಿರಲು ಸಂಭವವಿಲ್ಲ ಆದುದರಿಂದ ಅವರು ಪಾಪಗಳಿಂದ ಬಿಡಿಸಿಕೊಳ್ಳಲು ಯಜ್ಞ ಮಾಡುವ ಆಗತ್ಯವಿಲ್ಲ.

ಪ್ರ "ಸಂತ" ಎಂದರೆ ಸಿದ್ಧಪುರುಷರೆಂದು ಏಕೆ ಹೇಳಬಾರದು ? ಅವರೂ ಸಹ ಯಜ್ಞ ಮಾಡುತ್ತಾರೆಂದರೆ ಬರುವ ದೋಷವೇನು ?

ಉ ಸಂತರಿಗೆ ಸಿದ್ಧಪುರುಷರೆನ್ನಬಹುದು ಆದರೆ ಈ ಪ್ರಕರಣದಲ್ಲಿ "ಸಂತ" ಪದದ ಅರ್ಥ ನಿಸ್ವಾರ್ಥಬುದ್ಧಿಯಿಂದ ಕರ್ಮ ಮಾಡುವ ಸಾಧಕರು. ಸಿದ್ಧಪುರುಷರೂ ಯಜ್ಞವನ್ನು ಮಾಡಬಹುದು, ಆದರೆ ಪಾಪವನ್ನು ಕಳೆದುಕೊಳ್ಳುವುದಕ್ಕಲ್ಲ. ಸ್ವಾಭಾವಿಕವಾಗಿ ಲೋಕಸಂಗ್ರಹಾರ್ಥವಾಗಿ ಮಾಡಬಹುದು.

ಪ್ರ : ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆಂದರೆ ಏನು ?

ಉ. ಮನುಷ್ಯನಿಗೆ ಪೂರ್ವಸಂಚಿತ ಪಾಪವು ಇದ್ದೇ ಇರುತ್ತದೆ ಅದರ ಜೊತೆಗೆ ವರ್ತಮಾನ ಕಾಲದಲ್ಲಿ ಜೀವನ ನಿರ್ವಾಹಕ್ಕಾಗಿ ಹಣ ಸಂಪಾದಿಸುವುದರಲ್ಲಿಯೂ ಸಹ ಪಾಪವು ಸಂಭವಿಸುತ್ತದೆ. "ಸರ್ವಾರಂಭಾಹಿ ದೋಷೇಣ ಧೂಮೇನಾಗ್ನಿರಿವಾವೃತಾಃ" ಎಂಬ ನ್ಯಾಯದಂತೆ ಪ್ರತ್ಯೇಕ ಜೀವನಕ್ಕಾಗಿ ಮಾಡುವ ಕ್ರಿಯೆಗಳಲ್ಲಿ ಪಾಪವು ತಪ್ಪಿದ್ದಲ್ಲ. ಗೃಹಸ್ಥರ ಮನೆಯಲ್ಲಿ ನೋಡಿದರೂ ಈ ವಿಷಯವು ಸ್ಪಷ್ಟವಾಗುತ್ತದೆ

**ಕಂಡನೀ ಪೇಕ್ಷಿಣೀ ಚುಲ್ಲೀ ಉದಕುಂಭೀಚ ಮಾರ್ಜನೀ ।**
**ಪಂಚಸೂನಾ ಗೃಹಸ್ಥಸ್ಯ ವರ್ತತೆರಹರಹಃ ಸದಾ ॥**

ಕುಟ್ಟುವುದು, ಬೀಸುವುದು, ಅಡಿಗೆಮಾಡುವುದು, ನೀರು ತುಂಬುವುದು, ಕಸ ಹೊಡೆಯುವುದು ಇವುಗಳಲ್ಲಿ ಹಿಂಸೆಯು ತಪ್ಪಿದ್ದಲ್ಲ ಇದಲ್ಲದೆ ಪ್ರಮಾದ ಮೊದಲಾದ ಕಾರಣದಿಂದ ಅನೇಕ ಪಾಪಗಳು ಆಗುತ್ತಲೇ ಇರುತ್ತವೆ. ಈ ಪ್ರಸಂಗದಲ್ಲಿ ಯಾವನು ಈಶ್ವರಾರ್ಪಣ ಬುದ್ಧಿಯಿಂದ ಲೋಕಸಂಗ್ರಹಾರ್ಥ ವಾಗಿ ಯಾರಿಗಾದರೂ ಏನನ್ನಾದರೂ ಕೊಟ್ಟರೆ ಅದು ಈಶ್ವರಾರ್ಪಿತ ಮತ್ತು ಯಾರಿಂದಲಾದರೂ ಏನಾದರೂ ತೆಗೆದುಕೊಂಡರೆ ಅಥವಾ ಯಜ್ಞ ಮಾಡಿದ ಮೇಲೆ ಉಳಿದದ್ದನ್ನು ಸ್ವೀಕರಿಸುವಾಗ ಅದು ಈಶ್ವರಪ್ರಸಾದವೆಂದು ಆಚರಿಸಿ ದರೆ ಅವನು ಸರ್ವಪಾಪಗಳಿಂದ ಬಿಡಲ್ಪಡುತ್ತಾನೆ. ಇಂಥಾ ಸ್ವಾರ್ಥತ್ಯಾಗಿ ಕರ್ಮಯೋಗಿಯನ್ನು ಇಲ್ಲಿ "ಯಜ್ಞ ಶಿಷ್ಟಾಶಿನಃ" ಎಂದು ಕರೆದಿದ್ದಾರೆ.

ಪ್ರ : ಯಾವನು ತನ್ನ ಪೋಷಣೆಗಾಗಿ ಬೇಯಿಸಿ ತಿನ್ನುತ್ತಾನೋ ಅವನು ಪಾಪಿಯೆಂತಲೂ, ಅವನು ತಿನ್ನುವ ಅನ್ನವು ಪಾಪರೂಪವೆಂತಲೂ ಹೇಳುವ ಅಭಿಪ್ರಾಯವೇನು ?

ಉ . ಇಲ್ಲಿ ಬೇಯಿಸಿ ತಿನ್ನುತ್ತಾನೆ ಎಂಬ ಉಪಲಕ್ಷಣದಿಂದ ಇಂದ್ರಿಯ ಗಳಿಂದ ಭೋಗಿಸುವ ಸಮಸ್ತ ಭೋಗಗಳೆಂದು ತಿಳಿಯಬೇಕು ಯಾವನು ಈ ಭೋಗಗಳ ಉಪಾರ್ಜನೆಯನ್ನು ಮತ್ತು ಯಜ್ಞಾವಶಿಷ್ಟ ಉಪಭೋಗ ವನ್ನು ನಿಷ್ಕಾಮ ಭಾವದಿಂದ ಕೇವಲ ಲೋಕಸೇವೆಗಾಗಿ ಮಾಡುವನೋ ಅವನು ಎಲ್ಲಾ ವಿಧವಾದ ಪಾಪಗಳಿಂದ ಬಿಡಲ್ಪಡುತ್ತಾನೆ ಎಂಬುದರಲ್ಲಿ ಸಂದೇ ಹವಿಲ್ಲ, ಮತ್ತು ಸಕಾಮ-ಭಾವದಿಂದ ಎಲ್ಲರ ನ್ಯಾಯೋಚಿತ ಭಾಗವನ್ನು ಅವರ ವರಿಗೆ ಸಮರ್ಪಿಸಿ ಉಳಿದ ಭಾಗವನ್ನು ಭೋಗಿಸುವವನೂ ಸಹ ಪಾಪಿಯಲ್ಲ. ಆದರೆ ಪಾಪಿ ಯಾರು ? ಅಂದರೆ ಯಾವನು ಕೇವಲ ತನ್ನ ಸುಖಕ್ಕಾಗಿ ಅಂದರೆ ಶರೀರ ಹಾಗೂ ಇಂದ್ರಿಯಗಳ ಪೋಷಣೆಗಾಗಿ ಭೋಗ ಪದಾರ್ಥಗಳನ್ನು ಶೇಖ ರಿಸುವನೋ ಅವನು ಪಾಪವನ್ನೇ ಶೇಖರಿಸುತ್ತಾನೆ. ಯಾಕೆಂದರೆ ಅವನ ಕ್ರಿಯೆಗಳು ಯಜ್ಞಾರ್ಥವಲ್ಲ ಮತ್ತು ಅವನು ತಿನ್ನುವ ಅನ್ನ ಯಜ್ಞ ಮಾಡಿ

ಉಳಿದದ್ದಲ್ಲ. ಈ ರೀತಿ ಅವನ ಉಪಾರ್ಜನೆಯೂ, ಭೋಗವೂ ಪಾಪಮಯ ವಾದುದರಿಂದ ಅವನು ಪಾಪಿ.

ಸಂಬಂಧ : ಯಜ್ಞ ಮಾಡದೆ ಇರುವುದರಿಂದ ಆಗುವ ಹಾನಿ ಏನು ? ಎಂಬ ವಿಷಯವೂ ಮತ್ತು ಸೃಷ್ಟಿಚಕ್ರಕ್ಕಾಗಿ ಎಲ್ಲರೂ ಕರ್ಮವನ್ನು ಮಾಡ ಬೇಕೆಂಬ ವಿಷಯವೂ ಮುಂದಿನ ಶ್ಲೋಕಗಳಲ್ಲಿ ಪ್ರತಿಪಾದಿಸಲ್ಪಡುತ್ತದೆ.

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನ ಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋಯಜ್ಞಃ ಕರ್ಮಸಮುದ್ಭವಃ ॥೧೪॥**
**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರ ಸಮುದ್ಭವಮ್ ।**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇಪ್ರತಿಷ್ಠಿತಮ್ ॥ ೧೫ ॥**

ತಾ ಸಮಸ್ತ ಪ್ರಾಣಿಗಳು ಅನ್ನದಿಂದ ಉತ್ಪನ್ನವಾಗುತ್ತವೆ ಅನ್ನವು ವೃಷ್ಟಿಯಿಂದ ಉತ್ಪತ್ತಿಯಾಗುತ್ತದೆ ವೃಷ್ಟಿಯು ಯಜ್ಞದಿಂದಾಗುತ್ತದೆ. ಯಜ್ಞವು ಕರ್ಮದಿಂದ ಆಗುತ್ತದೆ. ಕರ್ಮವು ವೇದದಿಂದ ಉತ್ಪನ್ನವಾದು ದೆಂದು ತಿಳಿ. ವೇದವು ಅವಿನಾಶಿಯಾದ ಪರಮಾತ್ಮನಿಂದ ಉತ್ಪನ್ನವಾಗಿದೆ ಎಂದು ತಿಳಿ ಇದರಿಂದ ಸರ್ವವ್ಯಾಪಿಯಾದ ಪರಮಾತ್ಮ ಪರಮ ಅಕ್ಷರ ರೂಪನಲ್ಲಿ ಕರ್ಮವು ಪ್ರತಿಷ್ಠಿತವಾಗಿರುವುದೆಂದು ಸಿದ್ಧವಾಗುತ್ತದೆ.

## ವಿವರಣೆ

ಪ್ರ : "ಅನ್ನ" ಶಬ್ದದ ಅರ್ಥವೇನು ? ಮತ್ತು ಸಮಸ್ತ ಪ್ರಾಣಿಗಳು ಅನ್ನದಿಂದಲೇ ಉತ್ಪನ್ನವಾಗುತ್ತವೆ ಎಂಬುದರ ಭಾವವೇನು ?

ಉ : ಇಲ್ಲಿ ಅನ್ನವೆಂಬ ಶಬ್ದಕ್ಕೆ ವ್ಯಾಪಕವಾದ ಅರ್ಥವಿದೆ. ಆದುದ ರಿಂದ ಇದರ ಅರ್ಥ ಕೇವಲ ಅಕ್ಕಿ, ಗೋಧಿ ಮತ್ತು ಕಡಲೆ ಮೊದಲಾದ ಧಾನ್ಯ ಮಾತ್ರವೆಂದು ತಿಳಿಯಬಾರದು. ಅಂದರೆ ಯಾವ ಭಿನ್ನ ಭಿನ್ನ ಆಹಾರವನ್ನು ಮಾಡುವ ಯೋಗ್ಯ ಸ್ಥೂಲ ಮತ್ತು ಸೂಕ್ಷ್ಮ ಪದಾರ್ಥಗಳಿಂದ ಭಿನ್ನ ಭಿನ್ನ ಪ್ರಾಣಿಗಳು ಶರೀರಾದಿಗಳು ಪುಷ್ಟಿಯಾಗುತ್ತವೆಯೋ ಆ ಸಮಸ್ತ ಖಾದ್ಯ

ಇಲ್ಲಿ ಅನ್ನವೆಂದು ಕರೆದಿರುತ್ತಾರೆ ಅಂತಹ ಸಮಸ್ತ ಪ್ರಾಣಿಗಳು ಅನ್ನದಿಂದ ಉತ್ಪನ್ನವಾಗುತ್ತವೆ ಅಂದರೆ ಖಾದ್ಯ ಪದಾರ್ಥಗಳಿಂದಲೇ ಸಮಸ್ತ ಪ್ರಾಣಿಗಳ ಶರೀರದಲ್ಲಿ ರಜವೀರ್ಯಗಳು ಉತ್ಪನ್ನವಾಗುತ್ತವೆ. ಆ ರಜವೀರ್ಯಗಳ ಸಂಯೋಗದಿಂದ ಭಿನ್ನ ಭಿನ್ನ ಪ್ರಾಣಿಗಳ ಶರೀರಗಳು ಉತ್ಪನ್ನವಾಗುತ್ತವೆ. ಉತ್ಪತ್ತಿಯಾದನಂತರ ಅವುಗಳ ಪೋಷಣೆಯೂ ಸಹ ಖಾದ್ಯ ಪದಾರ್ಥಗಳಿಂದಲೇ ಆಗುತ್ತದೆ ಈ ಕಾರಣದಿಂದ ಸರ್ವ ಪ್ರಾಣಿಗಳ ಉತ್ಪತ್ತಿ, ವೃದ್ಧಿ ಮತ್ತು ಪೋಷಣೆಯು ಅನ್ನದಿಂದಲೇ ಆಗುತ್ತದೆ. ಇದೇ ವಿಷಯವನ್ನು ಶ್ರುತಿಯಲ್ಲಿ

''ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೆ
ಅನ್ನೇನ ಜಾತಾನಿಜೀವಂತಿ" (ತೈ ಉ )

ಎಂದು ಹೇಳಿದೆ ಎಲ್ಲಾ ಪ್ರಾಣಿಗಳು ಅನ್ನದಿಂದ ಉತ್ಪನ್ನವಾಗುತ್ತವೆ. ಉತ್ಪನ್ನವಾಗಿ ಅನ್ನದಿಂದಲೇ ಜೀವಿಸುತ್ತವೆ ಎಂದರ್ಥ.

ಪ್ರ : "ಅನ್ನದ ಉತ್ಪತ್ತಿಯು ವೃಷ್ಟಿಯಿಂದ" ಅಂದರೇನು ?

ಉ : ಸಂಸಾರದಲ್ಲಿರುವ ಸ್ಥೂಲ ಮತ್ತು ಸೂಕ್ಷ್ಮ ಖಾದ್ಯ ಪದಾರ್ಥಗಳ ಉತ್ಪತ್ತಿಯಲ್ಲಿ ಜಲವೇ ಪ್ರಧಾನವಾಗಿರುತ್ತದೆ ಯಾಕೆಂದರೆ ಸ್ಥೂಲ ಅಥವಾ ಸೂಕ್ಷ್ಮ ರೂಪದಿಂದ ಜಲದ ಸಂಬಂಧವು ಸರ್ವತ್ರ ಇರುತ್ತದೆ. ಮತ್ತು ಜಲದ ಆಧಾರವೇ ವೃಷ್ಟಿ.

ಪ್ರ : ವೃಷ್ಟಿ ಯಜ್ಞದಿಂದ ಆಗುತ್ತದೆ – ಎಂದರೇನು ?

ಉ : ಮನುಷ್ಯನ ಮೇಲೆ ಜಗತ್ತಿನ ಸರ್ವ ಪ್ರಾಣಿಗಳ ಭರಣ ಪೋಷಣೆಯ ಭಾರವು ಬಿದ್ದಿರುತ್ತದೆ. ಮನುಷ್ಯನು ತನ್ನ ಈ ಜವಾಬ್ದಾರಿಯನ್ನು ತಿಳಿದು ಮನ, ವಾಣಿ ಮತ್ತು ಶರೀರದಿಂದ ಸರ್ವ ಜೀವರುಗಳಿಗೆ ಹಿತವಾಗುವ ಕಾರ್ಯವನ್ನು ಮಾಡುತ್ತಾನಲ್ಲವೆ ? ಆ ಸರ್ವಭೂತ ಹಿತಕಾರ್ಯಕ್ಕೆ ಯಜ್ಞವೆನ್ನುತ್ತಾರೆ ಯಜ್ಞಕರ್ಮದಲ್ಲಿ ಹೋಮ, ಹವನ, ಧ್ಯಾನ, ತಪ ಮೊದಲಾದ ಸರ್ವ ಕರ್ಮಗಳ ಸಮಾವೇಶವಾಗುತ್ತದೆ ಯದ್ಯಪಿ ಇವುಗಳಲ್ಲಿ ಹವನ ಕ್ರಿಯೆಯ ಪ್ರಧಾನತೆ ಇರುವುದರಿಂದ, ಶಾಸ್ತ್ರಗಳಲ್ಲಿ ಅಗ್ನಿಯಲ್ಲಿ ಆಹುತಿ

ಕೊಡುವುದರಿಂದ ಮಳೆ ಆಗುತ್ತದೆ ಮಳೆಯಿಂದ ಅನ್ನವು ಉತ್ಪತ್ತಿಯಾಗು ತ್ತದೆ. ಅನ್ನದಿಂದ ಪ್ರಜೆಗಳ ಉತ್ಪತ್ತಿಯಾಗುತ್ತದೆ ಎಂದು ಹೇಳಿದೆ ಆದರೂ "ಯಜ್ಞ" ಶಬ್ದದಿಂದ ಕೇವಲ ಹವನ ಮಾತ್ರವೆಂದು ತಿಳಿಯಬಾರದು. ಲೋಕೋಪಕಾರಾರ್ಥವಾಗಿ ಮಾಡುವ ಸರ್ವ ಕರ್ಮಗಳಿಗೂ ಯಜ್ಞವೆಂದು ಹೆಸರು.

ವೃಷ್ಟಿ ಯಜ್ಞದಿಂದ ಆಗುತ್ತದೆ–ಎಂಬ ವಾಕ್ಯಕ್ಕೆ ಮನುಷ್ಯರಿಂದ ಮಾಡಲ್ಪಡುವ ಕರ್ತವ್ಯಪಾಲನಾರೂಪ ಯಜ್ಞದಿಂದ ವೃಷ್ಟಿಯಾಗುತ್ತದೆ ಎಂದರ್ಥ

ಶಂಕಾ ಕೆಲವು ದೇಶಗಳಲ್ಲಿ ಯಜ್ಞವೇ ನಡೆಯುವುದಿಲ್ಲ. ಅಲ್ಲಿಯೂ ಮಳೆಯಾಗುತ್ತದಲ್ಲ ?

ಸಮಾಧಾನ: ಅಲ್ಲಿಯೂ ಲೋಕೋಪಕಾರಾರ್ಥವಾಗಿ ಒಂದಲ್ಲ ಒಂದು ಸತ್ಕರ್ಮವು ನಡೆಯುತ್ತಲೇ ಇರುತ್ತದೆ. ಇದಲ್ಲದೆ ಮತ್ತೊಂದು ವಿಷಯ ಸೃಷ್ಟಿಯ ಆರಂಭ ಕಾಲದಿಂದಲೂ ಯಜ್ಞವಾಗುತ್ತಲೇ ಇದೆ ಈ ಯಜ್ಞಗಳ ಫಲ ಸ್ವರೂಪವಾಗಿ ಅಲ್ಲಿ ಮಳೆಯಾಗುತ್ತಲೇ ಇದೆ. ಪೂರ್ವಾರ್ಜಿತ ಯಜ್ಞ ಸಂಚಯವು ಸಮಾಪ್ತಿಯಾಗುವವರೆಗೆ ಮಳೆಯು ಆಗುತ್ತಲೇ ಇರುತ್ತದೆ. ಪರಂತು ಮನುಷ್ಯನು ಯಜ್ಞ ಮಾಡುವುದನ್ನು ನಿಲ್ಲಿಸುತ್ತಲೇ ಈ ಸಂಚಯವು ಕ್ರಮವಾಗಿ ಮುಗಿದುಹೋಗುತ್ತದೆ. ನಂತರ ವೃಷ್ಟಿಯಾಗದೆ ನಿಂತು ಹೋಗಬಹುದು ಇದರ ಫಲವಾಗಿ ಸೃಷ್ಟಿಯ ಜೀವರುಗಳ ಶರೀರಧಾರಣ ಮತ್ತು ಭರಣ–ಪೋಷಣವು ಕಠಿಣವಾಗುತ್ತದೆ. ಆದುದರಿಂದ ಕರ್ತವ್ಯ ಪಾಲನಾರೂಪ ಯಜ್ಞವನ್ನು ಮನುಷ್ಯನು ಅವಶ್ಯವಾಗಿ ಆಚರಿಸಲೇಬೇಕು.

ಪ್ರ : ಯಜ್ಞವು ಕರ್ಮದಿಂದ ಆಗುತ್ತದೆ ಎಂದರೇನು ?

ಉ : ಮನುಷ್ಯನ ಸ್ವಭಾವ ಪರಿಸ್ಥಿತಿಗೆ ಅನುಸಾರ ಮಾಡುವ ಯಜ್ಞ ಗಳೆಂದು ಹೇಳಿಸಿಕೊಳ್ಳುವವುಗಳೆಲ್ಲಾ ಮನ, ವಾಣಿ ಮತ್ತು ಇಂದ್ರಿಯಗಳ ದ್ವಾರಾ ಸಂಪಾದಿತವಾಗುತ್ತವೆ. ಶಾಸ್ತ್ರವಿಹಿತ ಕ್ರಿಯೆಗಳನ್ನು ಬಿಟ್ಟರೆ ಯಾವ ಯಜ್ಞವೂ ಸಿದ್ಧಿಸಲಾರದು ಇದೇ ವಿಷಯ ಮುಂದೆ ನಾಲ್ಕನೆಯ ಅಧ್ಯಾಯದ ೩೨ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟಿದೆ

ಪ್ರ · "ಬ್ರಹ್ಮೋದ್ಭವಂ" ಪದದಲ್ಲಿರುವ ಬ್ರಹ್ಮ ಪದಕ್ಕೆ ಅರ್ಥವೇನು ? ಕರ್ಮವು ಅದರಿಂದ ಉತ್ಪನ್ನವಾಗುತ್ತದೆ ಎಂದರೇನು ?

ಉ . ಗೀತೆಯಲ್ಲಿ "ಬ್ರಹ್ಮ" ಪದದ ಅರ್ಥ ಪ್ರಕರಣಾನುಸಾರ ಪರಮಾತ್ಮ (೮–೩ ೨೪), ಪ್ರಕೃತಿ (೧೪–೩ ೪), ಬ್ರಹ್ಮ (೮–೧೭.೧೧), ವೇದ (೪.೩೨, ೧೭ ೨೪) ಮತ್ತು ಬ್ರಾಹ್ಮಣ (೧೮ ೪೨) ಎಂದು ಮಾಡಲ್ಪಟ್ಟಿದೆ. ಇಲ್ಲಿ ಕರ್ಮಗಳ ಉತ್ಪತ್ತಿಯ ಪ್ರಕರಣವಾದುದರಿಂದ ಮತ್ತು ವಿಹಿತ ಕರ್ಮಗಳ ಜ್ಞಾನವು ಮನುಷ್ಯನಿಗೆ ವೇದ ಅಥವಾ ವೇದಾನುಸಾರವಾದ ಶಾಸ್ತ್ರದಿಂದ ಆಗಬೇಕಾಗಿದೆ ಆದುದರಿಂದ ಇಲ್ಲಿ "ಬ್ರಹ್ಮ" ಪದದ ಅರ್ಥವು ವೇದವೆಂದು ತಿಳಿಯಬೇಕು ಈ ಬ್ರಹ್ಮವು ಅಕ್ಷರದಿಂದ ಉತ್ಪನ್ನವಾಗುತ್ತದೆ ಎಂದು ಹೇಳಿರುವುದರಿಂದ ಇಲ್ಲಿ ಬ್ರಹ್ಮ ಪದದ ಅರ್ಥವನ್ನೂ ವೇದವೆಂದು ಮಾಡುವುದು ಉಚಿತವಾಗಿರುತ್ತದೆ. ಯಾಕೆಂದರೆ, ಪರಮಾತ್ಮನು ಸ್ವಯಂ ಅಕ್ಷರ ಸ್ವರೂಪನು ಮತ್ತು ಪ್ರಕೃತಿಯು ಅನಾದಿಯಾದುದರಿಂದ ಅದು ಅಕ್ಷರದಿಂದ ಉತ್ಪತ್ತಿಯಾಗಿರುವುದೆಂದು ಹೇಳಲಾಗದು ಅಲ್ಲದೆ ಚತುರ್ಮುಖ ಬ್ರಹ್ಮ ಮತ್ತು ಬ್ರಾಹ್ಮಣದ ಪ್ರಕರಣವಲ್ಲ ಕರ್ಮವು ವೇದದಿಂದ ಉತ್ಪತ್ತಿಯಾಗಿದೆ. ಯಾವನು ಯಾವ ಕರ್ಮವನ್ನು ಹೇಗೆ ಮಾಡಬೇಕು ಎಂಬುದನ್ನು ಶಾಸ್ತ್ರದಿಂದ ತಿಳಿದು ವಿಧಿವತ್ತಾಗಿ ಮಾಡಬೇಕಾಗಿರುತ್ತದೆ, ಅಂದರೆ ಯಜ್ಞ ಕ್ರಿಯೆಗಳನ್ನು ವೇದದಿಂದಲೇ ತಿಳಿಯಬೇಕಾಗಿದೆ ಈ ರೀತಿ ಮನುಷ್ಯನು ತನ್ನ ಕರ್ತವ್ಯದ ಜ್ಞಾನ ಮಾಡಿಕೊಳ್ಳಬೇಕು

ಪ್ರ . ವೇದವು ಅಕ್ಷರದಿಂದ ಉತ್ಪನ್ನವಾಗಿದೆ ಎಂದರೇನು ? ವೇದವು ಅನಾದಿಯೆಂದು ಶಾಸ್ತ್ರದ ತೀರ್ಮಾನವಲ್ಲವೆ ? ಅನಾದಿ ಪದಾರ್ಥ ಉತ್ಪತ್ತಿಯಾಗುವುದು ಹೇಗೆ ?

ಉ : ಪರಬ್ರಹ್ಮವು ನಿತ್ಯವಾದುದರಿಂದ ಅವನ ನಿಶ್ವಾಸರೂಪ ವೇದವೂ ನಿತ್ಯವೇ. ಇದರಲ್ಲಿ ಯಾವ ಸಂದೇಹವೂ ಇಲ್ಲ. ವೇದವು ಪರಮಾತ್ಮನಿಂದ ಉತ್ಪನ್ನವಾಗಿದೆ ಅಂದರೆ ವೇದವು ಮೊದಲು ಇರಲಿಲ್ಲ, ನಂತರ ಉಂಟಾಯಿತು ಎಂದರ್ಥವಲ್ಲ. ಸೃಷ್ಟಿಯ ಆದಿಕಾಲದಲ್ಲಿಯೇ ಪರಮೇಶ್ವರನಿಂದ ವೇದವು ಪ್ರಕಟವಾಗಿರುತ್ತದೆ. ಪ್ರಳಯದಲ್ಲಿ ಪರಮಾತ್ಮನಲ್ಲಿಯೇ ಲಯಿಸುತ್ತದೆ

ಎಂದು ಅಭಿಪ್ರಾಯ. ವೇದವು ಅಪೌರುಷೇಯ ಅಂದರೆ, ಯಾವ ಪುರುಷ ನಿಂದಲೂ ಆದುದಲ್ಲ. ಈ ಅಭಿಪ್ರಾಯವನ್ನು ಪ್ರಕಟ ಮಾಡುವುದಕ್ಕಾಗಿ ವೇದವು ಅಕ್ಷರದಿಂದ ಉತ್ಪನ್ನವಾಗಿದೆ ಎಂದು ಹೇಳಿದೆ ಹೀಗೆ ಹೇಳುವುದ ರಿಂದ ವೇದವು ಅನಾದಿ ಎಂದು ಸಿದ್ಧವಾಗುತ್ತದೆ. ಇದೇ ವಿಷಯವನ್ನು ೧೭ನೇ ಅಧ್ಯಾಯದ ೨೩ನೇ ಶ್ಲೋಕದಲ್ಲಿ ವೇದವು ಪರಮಾತ್ಮನಿಂದ ಉತ್ಪನ್ನವಾಗಿದೆ ಎಂದು ಹೇಳಿದೆ.

ಪ್ರ. "ಸರ್ವಗತಮ್" ಎಂಬ ವಿಶೇಷಣದಿಂದ ಕೂಡಿದ "ಬ್ರಹ್ಮ" ಪದದ ವಾಚಕ ಯಾವುದು ? ಮತ್ತು ಹೇತು ವಾಚಕವಾದ "ತಸ್ಮಾತ್" ಎಂಬ ಪದವನ್ನು ಪ್ರಯೋಗ ಮಾಡಿ ಅದನ್ನು ಯಜ್ಞದಲ್ಲಿ ನಿತ್ಯ ಪ್ರತಿಷ್ಠಿತ ವಾಗಿದೆ ಎಂಬುದರ ಅಭಿಪ್ರಾಯವೇನು ?

ಉ "ಸರ್ವಗತಮ್" ಎಂಬ ವಿಶೇಷಣದಿಂದ ಕೂಡಿದ "ಬ್ರಹ್ಮ" ಪದವು ಇಲ್ಲಿ ಸರ್ವವ್ಯಾಪಿ, ಸರ್ವಶಕ್ತಿವಂತ, ಸರ್ವಾಧಾರ ಪರಮೇಶ್ವರನ ವಾಚಕವಾಗಿದೆ. ಮತ್ತು "ತಸ್ಮಾತ್" ಪದ ಪ್ರಯೋಗ ದ್ವಾರಾ ಪರಮೇಶ್ವ ರನು ಯಜ್ಞದಲ್ಲಿ ನಿತ್ಯ ಪ್ರತಿಷ್ಠಿತನೆಂದು ಹೇಳಿ ಸಮಸ್ತ ಯಜ್ಞಗಳ ವಿಧಿಯು ಯಾವ ವೇದದಲ್ಲಿ ಪ್ರತಿಪಾದಿಸಲ್ಪಟ್ಟಿರುವುದೋ ಆ ವೇದವು ಪರಮೇಶ್ವರನ ವಾಣಿಯೆಂದು ತಿಳಿಸಿದೆ "ಅತಏವ" ವೇದದಲ್ಲಿ ಹೇಳಿದ ನಿಯಮದಂತೆ ಮಾಡಲ್ಪಡುವ ಯಜ್ಞದಲ್ಲಿ ಸಮಸ್ತ ಯಜ್ಞಗಳಲ್ಲಿ ಅಧಿಷ್ಠಾನನಾದ ಸರ್ವ ವ್ಯಾಪಿ ಪರಮೇಶ್ವರನು ಸದಾ ವಿರಾಜಮಾನನಾಗಿದ್ದಾನೆ. ಅಂದರೆ ಯಜ್ಞವು ಸಾಕ್ಷಾತ್ ಪರಮೇಶ್ವರನ "ಮೂರ್ತಿ" ಎಂದು ಭಾವಿಸಬೇಕು. ಈ ಕಾರಣ ದಿಂದ ಪ್ರತಿ ಒಬ್ಬರೂ ಭಗವತ್ಪ್ರಾಪ್ತಿಗಾಗಿ ಈಶ್ವರಾಜ್ಞಾನುಸಾರ ತಮ್ಮ ತಮ್ಮ ಕರ್ತವ್ಯವನ್ನು ಪಾಲನೆ ಮಾಡಬೇಕು

ಸಂಬಂಧ: ಈ ರೀತಿ ಸೃಷ್ಟಿಚಕ್ರದ ಸ್ಥಿತಿಯನ್ನು ವಿವರಿಸಿ ಅದು ಯಜ್ಞವನ್ನು ಅವಲಂಬಿಸಿದೆ ಎಂದು ಹೇಳಿ ಮತ್ತು ಪರಮಾತ್ಮನು ಯಜ್ಞದಲ್ಲಿ ಪ್ರತಿಷ್ಠಿತನಾಗಿರುವನೆಂದು ತಿಳಿಸಿ, ಈಗ ಆ ಯಜ್ಞವೆಂಬ ಸ್ವಧರ್ಮವನ್ನು ಪಾಲಿಸುವುದು ಅವಶ್ಯ ಕರ್ತವ್ಯವೆಂದು ಸಿದ್ಧಮಾಡಿ, ಆ ಸೃಷ್ಟಿ ಚಕ್ರದ ಅನು

ಕೂಲದಂತೆ ನಡೆಯದೆ ತನ್ನ ಕರ್ತವ್ಯವನ್ನು ಪಾಲನೆ ಮಾಡದೆ ಇದ್ದವನ ನಿಂದೆಯು ಮುಂದಿನ ಶ್ಲೋಕದಲ್ಲಿ ಹೇಳಲ್ಪಟ್ಟಿದೆ.

**ಏವಂ ಪ್ರವರ್ತಿತಂ ಚಕ್ರಂ ನಾನು ವರ್ತಯತೀಹಯಃ ।**
**ಅಘಾಯು ರಿಂದ್ರಿ ಯಾರಾಮೋ ಮೋಘಂ ಪಾರ್ಥಸಜೀವತಿ ॥೧೬॥**

ಎಲೈ ಅರ್ಜುನನೆ ! ಈ ರೀತಿಯಾಗಿ ವರ್ತಿಸಲ್ಪಟ್ಟ ಜಗಚ್ಚಕ್ರವನ್ನು ಯಾವನು ಇಲ್ಲಿ ಅನುಸರಿಸುವುದಿಲ್ಲವೋ, ಪಾಪಾಯುವೂ ಇಂದ್ರಿಯಾರಾಮನೂ ಆದ ಅವನು ವ್ಯರ್ಥವಾಗಿ ಜೀವಿಸುತ್ತಾನೆ.

ಪ್ರ ಈ ಶ್ಲೋಕದಲ್ಲಿರುವ "ಚಕ್ರಂ" ಎಂಬ ಪದದ ವಾಚಕವೇನು ? ಮತ್ತು ಅದರೊಂದಿಗೆ "ಏವಂ ಪ್ರವರ್ತಿತಂ" ಎಂಬ ವಿಶೇಷಣವನ್ನು ಸೇರಿಸುವ ಭಾವವೇನು ? ಮತ್ತು ಅದಕ್ಕೆ ಅನುಕೂಲವಾಗಿ ವರ್ತಿಸುವುದೆಂದರೇನು ?

ಉ : ೧೪ನೇ ಶ್ಲೋಕದ ವರ್ಣನಾನುಸಾರವಾಗಿ "ಚಕ್ರಮ್" ಎಂಬ ಪದವು ಸೃಷ್ಟಿ ಪರಂಪರೆಯ ವಾಚಕವಾಗಿದೆ. ಯಾಕೆಂದರೆ ಮನುಷ್ಯರಿಂದ ಮಾಡಲ್ಪಡುವ ಶಾಸ್ತ್ರವಿಹಿತ ಕ್ರಿಯೆಗಳಿಂದ ಯಜ್ಞವಾಗುತ್ತದೆ, ಯಜ್ಞದಿಂದ ಮಳೆ, ಮಳೆಯಿಂದ ಅನ್ನ, ಅನ್ನದಿಂದ ಪ್ರಾಣಿಗಳು, ಪುನಃ ಆ ಪ್ರಾಣಿಗಳ ಅಂತರ್ಗತವಾದ ಮನುಷ್ಯರಿಂದ ಮಾಡಲ್ಪಟ್ಟ ಕರ್ಮದಿಂದ ಯಜ್ಞ, ಯಜ್ಞದಿಂದ ಮಳೆ. ಈ ಪ್ರಕಾರ ಸೃಷ್ಟಿ ಪರಂಪರೆಯು ಚಕ್ರಾಕಾರವಾಗಿ ಸದಾ ತಿರುಗುತ್ತಿರುತ್ತದೆ ಈ ಅಭಿಪ್ರಾಯವನ್ನು ಪ್ರಕಟ ಮಾಡುವುದಕ್ಕಾಗಿ "ಚಕ್ರಮ್" ಎಂಬ ಪದದೊಂದಿಗೆ "ಏವಂ ಪ್ರವರ್ತಿತಮ್" ಎಂಬ ವಿಶೇಷಣವನ್ನು ಜೋಡಿಸಿದೆ. ಪ್ರತಿ ಒಬ್ಬರೂ ಅವರವರ ಸ್ವಭಾವಕ್ಕನುಸಾರವಾಗಿರುವ ಸ್ವಧರ್ಮವನ್ನು ಪರಿಪಾಲಿಸುವುದು ಕರ್ತವ್ಯವಾಗಿದೆ. ಇದೇ ಆ ಚಕ್ರದ ಅನುಸಾರವಾಗಿ ನಡೆಯುವುದು ಎಂದರ್ಥ. ಅತಏವ ಆಸಕ್ತಿ ಮತ್ತು ಕಾಮನೆಯನ್ನು ತ್ಯಜಿಸಿ ಕೇವಲ ಸೃಷ್ಟಿ ಚಕ್ರವನ್ನು ವ್ಯವಸ್ಥಾಬದ್ಧವಾಗಿ ಇರಿಸಲು ತನ್ನ ಕರ್ತವ್ಯ ಕರ್ಮವನ್ನು ಮಾಡುವ ಯೋಗಿಯು ಆ ಸ್ವಾರ್ಥದ ಗಂಧವಿಲ್ಲದ ಅವನು – ಸ್ವಧರ್ಮ ರೂಪ ಯಜ್ಞದಲ್ಲಿ ಪ್ರತಿಷ್ಠಿತವಾದ ಪರಬ್ರಹ್ಮವನ್ನು ಪ್ರಾಪ್ತಿ ಮಾಡಿಕೊಳ್ಳುತ್ತಾನೆ.

ಪ್ರ ಈ ಸೃಷ್ಟಿ ಚಕ್ರದ ಅನುಕೂಲದಂತೆ ನಡೆಯದವನು "ಇಂದ್ರಿಯಾ ರಾಮ" ಮತ್ತು "ಅಘಾಯು" ಎಂದು ಹೇಳಲು ಕಾರಣವೇನು ? ಮತ್ತು ಅವನ ಜೀವನವು ವ್ಯರ್ಥವೆಂದರೇನು ?

ಉ . ಸೃಷ್ಟಿ ಚಕ್ರದ ಅನುಕೂಲದಂತೆ ನಡೆಯದೆ ಇರುವುದು ಅಂದರೆ ತನ್ನ ಕರ್ತವ್ಯವನ್ನು ತಾನು ಮಾಡದೆ ಇರುವುದು ತನ್ನ ಕರ್ತವ್ಯವನ್ನು ಮರೆತು ವಿಷಯಗಳಲ್ಲಿ ಆಸಕ್ತನಾಗಿ ನಿರಂತರ ಇಂದ್ರಿಯಗಳಿಂದ ಭೋಗ ದಲ್ಲಿಯೇ ರಮಿಸುವವನನ್ನು ಮತ್ತು ಯೇನಕೇನ ಪ್ರಕಾರದಿಂದ ಇಂದ್ರಿಯ ಗಳನ್ನು ತೃಪ್ತಿಮಾಡಿಕೊಳ್ಳುವ ಕೆಲಸದಲ್ಲಿ ತೊಡಗಿರುವ ಮನುಷ್ಯನನ್ನು ಇಲ್ಲಿ "ಇಂದ್ರಿಯಾರಾಮ''ನೆಂದು ಕರೆದಿದೆ.

ಈ ಪ್ರಕಾರ ತನ್ನ ಕರ್ತವ್ಯವನ್ನು ಬಿಟ್ಟು ಮನುಷ್ಯನು ಭೋಗಗಳ ಕಾಮನೆಯಿಂದ ಪ್ರೇರಿತನಾಗಿ – ಸ್ವೇಚ್ಛಾಚಾರಿಯಾಗುತ್ತಾನೆ ಅವನು ತನ್ನ ಸ್ವಾರ್ಥದಲ್ಲಿ ನಿರತನಾದುದರಿಂದ ಪರಹಿತದ ಯೋಚನೆಯೇ ಅವನಿಗಿರುವುದಿಲ್ಲ ಇದರಿಂದ ಮತ್ತೊಬ್ಬರ ಮೇಲೆ ಕೆಟ್ಟ ಪ್ರಭಾವವು ಬೀಳುತ್ತದೆ. ಮತ್ತು ಸೃಷ್ಟಿಯ ವ್ಯವಸ್ಥೆಯಲ್ಲಿ ವಿಘ್ನವುಂಟಾಗಿ ಸರ್ವ ಪ್ರಜಗಳಿಗೆ ದುಃಖವುಂಟಾಗು ತ್ತದೆ. ಈ ಪ್ರಕಾರ ತನ್ನ ಕರ್ತವ್ಯವನ್ನು ಪರಿಪಾಲಿಸದೆ ಸೃಷ್ಟಿಯ ವ್ಯವಸ್ಥೆಗೆ ವಿಘ್ನವನ್ನುಂಟುಮಾಡಿದ ಮನುಷ್ಯನು ದೋಷಕ್ಕೆ ಭಾಗಿಯಾಗುತ್ತಾನೆ ಅವನು ತನ್ನ ಸ್ವಾರ್ಥ ಸಾಧನೆಗಾಗಿ ಸಾಯುವವರೆಗೆ ಅನ್ಯಾಯದಿಂದ ಧನ ಸಂಗ್ರಹ ಮಾಡುತ್ತಿರುವುದರಿಂದ ಅವನನ್ನು " ಅಘಾಯು " ಎಂದು ಕರೆದಿದೆ.

ಅವನು ಮನುಷ್ಯ ಜೀವನದ ಪ್ರಧಾನ ಲಕ್ಷ್ಯವನ್ನು ಗುರುತಿಸಿ ಸಂಸಾರ ದಲ್ಲಿ ಎಲ್ಲಾ ಪ್ರಾಣಿಗಳಿಗೂ ಸುಖವನ್ನುಂಟುಮಾಡುತ್ತಾ ಮೋಕ್ಷವನ್ನು ಪಡೆ ಯುವುದಕ್ಕೆ ವಂಚಿತನಾಗಿ ತನ್ನ ಅಮೂಲ್ಯ ಮನುಷ್ಯ ಜೀವನವನ್ನು ವಿಷಯ ಭೋಗದಲ್ಲಿಯೇ ಕಳೆಯುತ್ತಾ ಇರುವುದರಿಂದ ಇಲ್ಲಿ ಅವನ ಜೀವನವು ವ್ಯರ್ಥ ವೆಂದು ಹೇಳಿದೆ

ಸಂಬಂಧ . ಹೀಗೆ ಕರ್ಮಗಳನ್ನು ಮಾಡಲೇಬೇಕೆಂಬುದು ಎಲ್ಲರಿಗೂ ಹೇಳಿದ ಮಾತೋ ಇಲ್ಲವೇ ಕೇವಲ ಸಾಧಕರಿಗೆ ಹೇಳಿದ ಮಾತೋ ಎಂಬ ನಿರ್ಣಯವು ಮುಂದಿನ ಶ್ಲೋಕದಲ್ಲಿ ಮಾಡಲ್ಪಡುತ್ತದೆ.

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಾಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನವಿದ್ಯತೆ ॥೧೭॥**

ತಾತ್ಪರ್ಯ ಪರಂತು ಯಾವ ಮನುಷ್ಯನು ಆತ್ಮನಲ್ಲಿಯೇ ರಮಣ ಮಾಡುವನೋ ಮತ್ತು ಆತ್ಮನಲ್ಲಿಯೇ ತೃಪ್ತ ಮತ್ತು ಆತ್ಮನಲ್ಲಿಯೇ ಸಂತುಷ್ಟನಾಗಿರುವನೋ ಅವನಿಗಾಗಿ ಯಾವ ಕರ್ತವ್ಯವೂ ಇಲ್ಲ.

## ವಿವರಣೆ

ಪ್ರ : "ತು" ಪದದ ಅಭಿಪ್ರಾಯವೇನು ?

ಉ ಪೂರ್ವ ಶ್ಲೋಕದಲ್ಲಿ ಯಾರಿಗಾಗಿ ಸ್ವಧರ್ಮ ಪಾಲನೆಯು ಅವಶ್ಯ ಕರ್ತವ್ಯವೆಂತಲೂ, ಸ್ವಧರ್ಮವನ್ನು ಪರಿಪಾಲಿಸದೆ ಇದ್ದರೆ ಅವನು ''ಅಘಾಯು" ಎಂತಲೂ, ಅವನ ಜೀವನವು ವ್ಯರ್ಥವೆಂತಲೂ ಹೇಳಿದ ಮನುಷ್ಯನಿಗಿಂತ ವಿಲಕ್ಷಣತೆಯನ್ನು ತೋರಿಸಿ ಅವನು ಶಾಸ್ತ್ರದ ಶಾಸನವನ್ನು ಸಹ ದಾಟಿರುವನೆಂದು ಅವನನ್ನು ಪ್ರತ್ಯೇಕಿಸಿ ತೋರಿಸಲು ಇಲ್ಲಿ "ತು" ಪದ ಪ್ರಯೋಗವಾಗಿದೆ.

ಪ್ರ : "ಆತ್ಮರತಿಃ" "ಆತ್ಮತೃಪ್ತಃ" ಮತ್ತು "ಆತ್ಮನಿ ಏವಸಂತುಷ್ಟಃ" ಈ ಮೂರು ವಿಶೇಷಣಗಳಿಂದ ಕೂಡಿದ "ಯಃ" ಎಂಬ ಪದವು ಯಾವ ಮನುಷ್ಯನ ವಾಚಕ ? ಮತ್ತು ಅವನನ್ನು ''ಮಾನವಃ" ಎಂದು ಸಂಬೋಧಿಸಲು ಕಾರಣವೇನು ?

ಉ : ಉಪರ್ಯುಕ್ತ ವಿಶೇಷಣಗಳಿಂದ ಕೂಡಿದ "ಯಃ" ಪದವು ತನ್ನನ್ನು ಸಚ್ಚಿದಾನಂದರೂಪ ಪರಬ್ರಹ್ಮವೆಂದು ದೃಢವಾಗಿ ತಿಳಿದ ಜ್ಞಾನಿಯ ವಾಚಕವಾಗಿದೆ. ಮತ್ತು "ಮಾನವಃ'' ಎಂದು ಕರೆಯಲು ತಾನು ಸಚ್ಚಿದಾನಂದರೂಪ ಪರಬ್ರಹ್ಮವೆಂಬ ಜ್ಞಾನವನ್ನು ಮಾನವಮಾತ್ರರೆಲ್ಲರೂ ಸಂಪಾದಿಸಿಕೊಳ್ಳಲಾಗುವುದು ಎಂಬ ಸೂಚನೆಯು ''ಮಾನವಃ" ಪದದಿಂದ ತಿಳಿದು ಬರುತ್ತದೆ, ಅಂದರೆ ಭಗವತ್ಪ್ರಾಪ್ತಿ ಅಂದರೆ ಮೋಕ್ಷಕ್ಕೆ ಎಲ್ಲರಿಗೂ ಅಧಿಕಾರವಿದೆ ಎಂದರ್ಥ.

ಪ್ರ : ''ಏವ" ಎಂಬ ಅವ್ಯಯದೊಂದಿಗೆ ಇರುವ ''ಆತ್ಮರತಿಃ" ಎಂಬ ಪದದ ಭಾವವೇನು ?

ಉ ಈ ವಿಶೇಷಣದಿಂದ ಮುಕ್ತ ಪುರುಷನ ದೃಷ್ಟಿಯಲ್ಲಿ ಸಂಪೂರ್ಣ ಜಗತ್ತು ಸ್ವಪ್ನದಿಂದ ಎಚ್ಚತ್ತ ಮನುಷ್ಯನ ದೃಷ್ಟಿಯಲ್ಲಿ ಸ್ವಪ್ನವು ಪ್ರತೀತಿ ಯಾಗುವಂತೆ ಎಚ್ಚರ ಪ್ರಪಂಚವೂ ಆಗುತ್ತದೆ ಅವನು ದೃಷ್ಟಿಯಲ್ಲಿ ಸಂಸಾರದ ಯಾವ ಪದಾರ್ಥಗಳಲ್ಲಿಯೂ ಕಿಂಚಿನ್ಮಾತ್ರವೂ ಪ್ರೀತಿ ಇರುವುದಿಲ್ಲ. ಆದುದರಿಂದ ಅವನು ಸಂಸಾರದ ಯಾವ ಪದಾರ್ಥದಲ್ಲಿಯೂ ರಮಿಸುವುದಿಲ್ಲ. ಪ್ರತ್ಯಗಭಿನ್ನ ಪರಬ್ರಹ್ಮದಲ್ಲಿಯೇ ಅವನಿಗೆ ಸ್ಥಿತಿಯುಂಟಾಗುತ್ತದೆ ಒಂದು ರೀತಿಯಿಂದ ಅವನ ಮನ, ಬುದ್ಧಿ, ಇಂದ್ರಿಯಗಳು ಸಂಸಾರದಲ್ಲಿ ರಮಿಸು ತ್ತಿದ್ದರೂ ಅವನಿಂದ ಕೇವಲ ಪರಮಾತ್ಮನ ಸ್ವರೂಪ ಚಿಂತನೆ ಮತ್ತು ನಿಶ್ಚಯ ಇವು ಸ್ವಾಭಾವಿಕವಾಗಿ ಇರುತ್ತವೆ. ಇದೇ ''ಆತ್ಮರತಿಃ" ಎಂಬ ಪದದ ಅರ್ಥ.

ಪ್ರಶ್ನೆ : ''ಆತ್ಮರತಿಃ" ಎಂಬ ವಿಶೇಷಣದ ಭಾವವೇನು ?

ಉತ್ತರ . ''ಆತ್ಮಾಲಾಭಾನ್ನ ಪರೋಲಾಭ'' ಎಂಬ ಶ್ರುತಿಯಂತೆ ಮುಕ್ತ ಪುರುಷನು ಪೂರ್ಣಕಾಮನಾಗಿರುತ್ತಾನೆ ಅವನು ಇನ್ನು ಮೇಲೆ ಪ್ರಾಪ್ತಿ ಮಾಡಿಕೊಳ್ಳುವ ಪದಾರ್ಥವೇ ಇಲ್ಲ. ಅವನಿಗೆ ಸಾಂಸಾರಿಕ ವಸ್ತು ವಿನ ಆಗತ್ಯ ಇರುವುದಿಲ್ಲ. ಅವನು ಪ್ರತ್ಯಗಭಿನ್ನ ಪರಬ್ರಹ್ಮದಲ್ಲಿ ಸ್ಥಿತನಾಗಿದ್ದು ನಿತ್ಯ ತೃಪ್ತನಾಗಿರುತ್ತಾನೆ.

ಪ್ರಶ್ನೆ : ''ಆತ್ಮನಿ ಏವಸಂತುಷ್ಟಃ'' ವಿಶೇಷಣದ ಭಾವವೇನು ?

ಉತ್ತರ · ಮುಕ್ತ ಪುರುಷನು ನಿತ್ಯ-ನಿರಂತರ ಆತ್ಮನಲ್ಲಿ ಸಂತುಷ್ಟ ನಾಗಿರುತ್ತಾನೆ ಸಂಸಾರದ ಯಾವ ವಸ್ತುವೂ ಅವನನ್ನು ಆಕರ್ಷಿತ ಮಾಡ ಲಾರದು. ಅವನಿಗೆ ಯಾವ ಕಾರಣದಿಂದಲೂ, ಯಾವ ಘಟನೆಯಿಂದಲೂ ಕಿಂಚಿನ್ಮಾತ್ರವೂ ಅಸಂತೋಷವಿರುವುದಿಲ್ಲ ಅನಾತ್ಮಗಳೆಂದು ಹೇಳಿಸಿಕೊಳ್ಳುವ ಸಂಸಾರದ ಯಾವ ವಸ್ತುವಿನೊಂದಿಗೂ ಸಂಬಂಧವಿರುವುದಿಲ್ಲ. ಅವನು ಸದಾ ಹರ್ಷ ಶೋಕಾದಿ ವಿಕಾರಗಳಿಗೆ ಅತೀತನಾಗಿರುತ್ತಾನೆ. ಆದುದರಿಂದ ಅವನು ''ಆತ್ಮನಿ ಏವಸಂತುಷ್ಟಃ'' ಎಂದು ಹೇಳಿಸಿಕೊಳ್ಳುತ್ತಾನೆ.

ಪ್ರಶ್ನೆ · "ಅವನಿಗೆ ಯಾವ ಕರ್ತವ್ಯವೂ ಇರುವುದಿಲ್ಲ" ಅಂದರೇನು ?

ಉತ್ತರ. ಮುಕ್ತ ಪುರುಷನಿಗೆ ಪರಮಾತ್ಮ ಪ್ರಾಪ್ತಿಯಾಗಿರುವುದರಿಂದ ಅವನ ಸಮಸ್ತ ಕರ್ತವ್ಯಗಳು ಸಮಾಪ್ತಿಯಾಗಿರುತ್ತವೆ. ಆದುದರಿಂದಲೇ ಅವನು ಕೃತಕೃತ್ಯನು ಯಾಕೆಂದರೆ, ಮನುಷ್ಯನನ್ನು ಕುರಿತು ಎಷ್ಟು ಕರ್ತವ್ಯಗಳ ವಿಧಾನವಿರುವುದೋ ಅವೆಲ್ಲಾ ಮುಕ್ತಿಗಾಗಿ; ಅವನು ಮುಕ್ತನಾದ ಮೇಲೆ ಅಂದರೆ ಅವನ ಉದ್ದೇಶವು ಪೂರ್ಣವಾದ ಮೇಲೆ ಅವನು ಮಾಡಬೇಕಾದದ್ದು ಏನೂ ಇಲ್ಲ ಆಗ ಅವನು "ಕೃತಕೃತ್ಯ" ನೆನಿಸುತ್ತಾನೆ.

ಪ್ರಶ್ನೆ ಹಾಗಾದರೆ ಜ್ಞಾನಿಯು ಯಾವ ಕರ್ಮವನ್ನೂ ಮಾಡುವುದಿಲ್ಲವೆ?

ಉತ್ತರ. ಜ್ಞಾನಿಗೂ ಮನ-ಇಂದ್ರಿಯಗಳಿಗೂ ಯಾವ ಸಂಬಂಧವೂ ಇಲ್ಲ ಈ ಕಾರಣದಿಂದ ಅವನ ಮನ, ಇಂದ್ರಿಯಗಳಿಂದ ಪೂರ್ವ ಅಭ್ಯಾಸದ ಬಲದಿಂದ ಪ್ರಾರಬ್ಧ ಕರ್ಮಾನುಸಾರ ವಿಹಿತ ಕರ್ಮಗಳು ನಡೆಯುತ್ತಲೇ ಇರುತ್ತವೆ ಆದರೆ ಅವನ ಕರ್ಮಗಳು ಮಮತ್ವ, ಅಭಿಮಾನ, ಆಸಕ್ತಿ ಮತ್ತು ಕಾಮನಾರಹಿತವಾಗಿರುತ್ತವೆ ಈ ಕಾರಣದಿಂದ ಅವನ ಕರ್ಮಗಳೆಲ್ಲವೂ ಪವಿತ್ರವಾಗಿರುತ್ತವೆ. ಅವನ ಕರ್ಮಗಳು ಇತರೆಯವರಿಗೆ ಆದರ್ಶವಾಗಿರುತ್ತವೆ ಹೀಗಿದ್ದರೂ ಅವನು ಸರ್ವಶಾಸ್ತ್ರಗಳ ಶಾಸನವನ್ನು ದಾಟಿರುತ್ತಾನೆ

**ನೈವತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ |**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ||೧೮||**

ತಾ ಆ ಮಹಾಪುರುಷನಿಗೆ ಈ ವಿಷಯದಲ್ಲಿ ಕರ್ಮ ಮಾಡುವುದರಿಂದ ಯಾವ ಪ್ರಯೋಜನವೂ ಇರುವುದಿಲ್ಲ. ಕರ್ಮ ಮಾಡದೆ ಇರುವುದರಿಂದಲೂ ಯಾವ ಪ್ರಯೋಜನವೂ ಇರುವುದಿಲ್ಲ ತಥಾ ಎಲ್ಲಾ ಪ್ರಾಣಿಗಳಲ್ಲಿ ಅವನಿಗೆ ಕಿಂಚಿನ್ಮಾತ್ರವೂ ಸ್ವಾರ್ಥ ಸಂಬಂಧವಿಲ್ಲ.

## ವಿವರಣೆ

ಶ್ರುತಿ "ನೈನಂ ಕೃತಾಕೃತೇತಪತಃ" ಎಂಬಂತೆ ಮಾಡಿದ ಕರ್ಮಗಳೂ ಮಾಡದೆ ಇರುವ ಕರ್ಮಗಳೂ ಇವನಿಗೆ ತಾಪವನ್ನು ಕೊಡುವುದಿಲ್ಲ. ಆ ಜ್ಞಾನಿಗೆ ತಾನು ಮಾಡಿದ ಕರ್ಮದಿಂದ ಪ್ರಯೋಜನವು ಇಲ್ಲವೇ ಇಲ್ಲ. ಈ ಲೋಕವೂ ಪರಲೋಕವೂ ಬರೀ ತೋರಿಕೆಯವೆಂದೂ ಅಶಾಶ್ವತವೆಂದೂ ಅವನು ತಿಳಿದಿರುವುದರಿಂದ ಕರ್ಮಗಳು ಕೊಡುವುದಕ್ಕೆ ಬರುವ ಆ ಫಲಗಳನ್ನು ಅವನು ಕಡೆಗಣ್ಣಿನಿಂದಲೂ ನೋಡುವುದಿಲ್ಲ. ಮಾಡದೆ ಇರುವುದರಿಂದ ಈ ಲೋಕದಲ್ಲಿ ಜ್ಞಾನಿಗೆ ಯಾವ ಹಾನಿಯೂ ಇರುವುದಿಲ್ಲ. ಕರ್ಮಗಳನ್ನು ಮಾಡದೆ ಇದ್ದರೆ ಪ್ರತ್ಯವಾಯ ಎಂಬ ದೋಷ ಗಂಟುಬೀಳುವುದೆಂದು ಮೀಮಾಂಸಕರು ಹೇಳುತ್ತಾರೆ. ವಿಚಾರವೆಂಬ ಒರೆಗಲ್ಲಿನ ಮೇಲೆ ತಿಕ್ಕಿ ನೋಡಿದರೆ ಈ ಅಭಿಪ್ರಾಯದಲ್ಲಿ ಕುಂದು ಕಂಡುಬರುತ್ತದೆ ಅದೇನೆಂದರೆ, ತಾಯಿಯಿದ್ದರೆ ಮಕ್ಕಳು ಹುಟ್ಟುವಂತೆ, ಇರುವ ವಸ್ತುವಿನಿಂದ ಮತ್ತೊಂದು ಹುಟ್ಟಬಹುದು ತಾಯಿಯೇ ಇಲ್ಲದೆ ಮಕ್ಕಳು ಹೇಗೆ ಹುಟ್ಟುವುದಿಲ್ಲವೋ ಹಾಗೆ ಕರ್ಮವೆಂಬುದು ನಡೆಯದೆ ಅದರಿಂದ ದೋಷವಾಗಲೀ ಗುಣವಾಗಲೀ ಯಾವುದೂ ಹುಟ್ಟುವುದಿಲ್ಲ ಆದ್ದರಿಂದ ಕರ್ಮವನ್ನು ಮಾಡದೆ ಇರುವುದರಿಂದ ದೋಷವು ಬರುವುದೆಂಬ ಮಾತು ನಿಲ್ಲಲಾರದು ಕರ್ಮವನ್ನು ಮಾಡದೆ ಇರುವುದರಿಂದ ಚಿತ್ತವು ಮಲಿನವಾಗಿಯೇ ಉಳಿದುಕೊಂಡಿರುವುದೆಂದು ಹೇಳಿ ಅದರ ಶುದ್ಧಿಯ ಲಾಭದ ಮೇಲೆ ದೃಷ್ಟಿಯನ್ನಿಟ್ಟು ಕರ್ಮವನ್ನು ಮಾಡಬೇಕೇ ಹೊರತು ದೋಷದ ಹೆದರಿಕೆಯಿಂದ ಮಾಡುವುದು ಅಷ್ಟು ಸಮಂಜಸವಲ್ಲ ಒಂದು ಪಕ್ಷ ಮೀಮಾಂಸಕರ ಮಾತಿಗೆ ಗೌರವವನ್ನು ಕೊಟ್ಟು ದೋಷ ಬರುವುದೆಂದು ಒಪ್ಪಿಕೊಂಡರೂ ಆ ದೋಷವು ಬಂದು ಜ್ಞಾನಿಯ ಆತ್ಮನಿಗೆ ಯಾವ ಕುಂದಕವನ್ನೂ ಮಾಡಲಾರದು ಅಥವಾ ಒಬ್ಬನು ಕರ್ಮವನ್ನು ಬಿಟ್ಟಿದ್ದರಿಂದ ದೇವತೆಗಳು ಸಿಟ್ಟಿಗೆದ್ದು ಅವನ ದಾರಿಯಲ್ಲಿ ಅಟಂಕವನ್ನು ಮಾಡುವರೆಂದು ಹೇಳಿದರೂ ಇದು ಸಾಧಕರ ವಿಷಯಕ್ಕೆ ಸರಿಯಾಗಬಹುದು ಅವರಿನ್ನೂ ಆತ್ಮಜ್ಞಾನವನ್ನು ಪಡೆಯಬೇಕಾಗಿರುವುದರಿಂದ ತಮಗೆ ದೇವತೆಗಳು ಅಡ್ಡ ಬರದಂತೆ ಅವರು ಕರ್ಮವನ್ನು ಮಾಡ

ಬೇಕಾಗುವುದು ಇನ್ನು ಜ್ಞಾನವಾಗಿದ್ದರೂ ಮೋಕ್ಷಕ್ಕೆ ದೇವತೆಗಳು ಅಡ್ಡ ಬಂದಾರೆಂಬ ಭಯವೇ ಇಲ್ಲ. ಯಾಕೆಂದರೆ ಜ್ಞಾನಿಯ ಮೇಲೆ ಅವರ ಕೈ ಏನೂ ನಡೆಯಲಾರದು ಕಲ್ಲುಬಂಡೆಯನ್ನು ಚೂರು ಚೂರು ಮಾಡಬೇಕೆಂದು ಮಣ್ಣು ಹೆಂಟೆಯು ಅದರ ಮೇಲೆ ಬಿದ್ದರೆ ಅದಕ್ಕೆ ಏನು ಗತಿಯಾಗುವುದೋ ಅದರಂತೆ ಜ್ಞಾನಿಯ ಮೇಲೆ ಬಿದ್ದ ದೇವತೆಗಳಿಗೂ ಅದೇ ಗತಿ ಇದಲ್ಲದೆ ಜ್ಞಾನಿಗಳು ದೇವತೆಗಳಿಗೂ ಆತ್ಮಸ್ವರೂಪರಾಗಿರುವರು ಇದೆ ವಿಷಯವನ್ನು ಶ್ರುತಿಯು–

"ತಸ್ಯ ಹ ನ ದೇವಾಶ್ಚ ನಾ ಭೂತ್ಯಾ ಈಶತ ಆತ್ಮಾಹ್ಯೇಷಾಂ ಸಭವತಿ" ಅಂದರೆ ಅವನನ್ನು ದೇವತೆಗಳು ಪರಾಭವ ಪಡಿಸಲು ಸಮರ್ಥರಲ್ಲ; ಏಕೆಂದರೆ ಅವನು ಅವರಿಗೆಲ್ಲ ಆತ್ಮನಾಗಿರುವನು ಎಂದರ್ಥ.

ಮತ್ತೇನೆಂದರೆ ಜ್ಞಾನ ಮತ್ತು ಮೋಕ್ಷವು ಬೇರೆ ಬೇರೆ ಪದಾರ್ಥಗಳಲ್ಲ. ಜ್ಞಾನದ ಸಮಕಾಲದಲ್ಲಿಯೇ ಮೋಕ್ಷವಾಗಿಯೇ ಇರುವುದು. ಹಗ್ಗವೆಂದು ಕಾಣುತ್ತಲೇ ಅದರಲ್ಲಿ ಕಾಣುತ್ತಿದ್ದ ಹಾವಿನ ಭಯವು ಹೋಗಿಯೇಬಿಡುವಂತೆ ತನ್ನ ಆತ್ಮಸ್ವರೂಪದ ಜ್ಞಾನವಾಗುತ್ತಲೇ ಅದರ ಆಧಾರದಿಂದ ಆತ್ಮದಂತೆ ತೋರುತ್ತಿದ್ದ ದೇಹಾದಿಗಳ ನಾಶದ ಭಯವು ಹೋಗಿಯೇಬಿಡುವುದು. ಆದ್ದರಿಂದ ಕರ್ಮವನ್ನು ಮಾಡದೆ ಇರುವುದರಿಂದ ಜ್ಞಾನಿಗೆ ಯಾವ ಹಾನಿಯೂ ಇಲ್ಲ ಈ ಜ್ಞಾನಿಗೆ ಜಗತ್ತಿನಲ್ಲಿರುವ ಯಾವ ವಸ್ತುವಿನಲ್ಲಿಯೂ ತನಗಾಗ ಬೇಕಾದ ಪ್ರಯೋಜನಕ್ಕೆ ಸಾಧಕವಾದದ್ದು ಯಾವುದೂ ಇಲ್ಲವೇ ಇಲ್ಲ

ಸಂಬಂಧ ಇಲ್ಲಿಯವರೆಗೆ ಶ್ರೀ ಕೃಷ್ಣನು ಅನೇಕ ಕಾರಣಗಳನ್ನು ತೋರಿಸಿ ಮನುಷ್ಯನಿಗೆ ಪರಮ ಶ್ರೇಯಃರೂಪ ಮೋಕ್ಷವಾಗುವವರೆಗೆ ಸ್ವಧರ್ಮರೂಪ ಕರ್ಮವನ್ನು ಆಚರಿಸುವುದು ಅವಶ್ಯ ಕರ್ತವ್ಯವೆಂದು ತೋರಿಸಿ ದನು ಮತ್ತು ಮುಕ್ತನಿಗೆ ಯಾವ ಕರ್ತವ್ಯವೂ ಇರುವುದಿಲ್ಲ, ಇಲ್ಲದಿದ್ದರೂ ಪ್ರಾರಬ್ಧ ಕರ್ಮಾನುಸಾರ ಅವನ ದೇಹೇಂದ್ರಿಯಗಳಿಂದ ಲೋಕ ಸಂಗ್ರಹ ಕ್ಕಾಗಿ ಕರ್ಮವು ಆಗುತ್ತಿರುತ್ತದೆ ಎಂದು ಬೋಧಿಸಿದನು ಇನ್ನು ಮುಂದಿನ ಶ್ಲೋಕದಲ್ಲಿ ಕರ್ಮವು ಬಂಧಕವಾಗದಂತೆ ಮಾಡುವ ಯುಕ್ತಿಯು ಪ್ರತಿಪಾದಿ ಸಲ್ಪಡುತ್ತದೆ.

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥೧೯॥**

ಜ್ಞಾನಿಗೆ ಮಾತ್ರ ಕರ್ಮವಿಲ್ಲದ್ದರಿಂದ, ನೀನು ಯಾವಾಗಲೂ ಕರ್ತವ್ಯವಾದ ಕರ್ಮವನ್ನು ಫಲದ ಬಯಕೆಯಿಲ್ಲದೆ ನೆರವೇರಿಸು. ಯಾಕೆಂದರೆ ಮೋಕ್ಷವನ್ನು ಬಯಸುವ ಸಾಧಕನು ಫಲದ ಬಯಕೆಯಿಲ್ಲದೆ ಕರ್ಮವನ್ನು ಮಾಡಿ, ಚಿತ್ತಶುದ್ಧಿಯನ್ನು ಹೊಂದಿ, ಪರಬ್ರಹ್ಮ ಸ್ವರೂಪವನ್ನು ಪಡೆಯುತ್ತಾನೆ.

**ವಿವರಣೆ**

ಪ್ರಶ್ನೆ : "ತಸ್ಮಾತ್" ಪದದ ಭಾವವೇನು ?

ಉತ್ತರ : ಈ ಪದವು ಹಿಂದಿನ ಶ್ಲೋಕಗಳ ಸಂಬಂಧವನ್ನು ತೋರಿಸುತ್ತದೆ ಇಲ್ಲಿಯವರೆಗೆ ಮಾಡಿದ ವರ್ಣನೆಯಲ್ಲಿ ಯಾವ ಯಾವ ಕಾರಣಗಳಿಂದ ಸ್ವಧರ್ಮವನ್ನು ಪಾಲಿಸಲು ಪರಮಾವಶ್ಯಕತೆಯನ್ನು ಸಿದ್ಧಮಾಡಿ ತೋರಿಸಿರುವುದೋ ಆ ಎಲ್ಲಾ ಮಾತುಗಳಿಂದ ವಿಚಾರ ಮಾಡಿನೋಡಲು ಸರ್ವರೂ ಸರ್ವ ಪ್ರಕಾರದಿಂದಲೂ ಸ್ವಧರ್ಮವನ್ನು ಆಚರಿಸುವುದರಲ್ಲಿಯೇ ಸರ್ವರ ಹಿತ. ಆದುದರಿಂದ ಅರ್ಜುನಾ ! ನೀನೂ ಸಹ ನಿನ್ನ ಸ್ವಧರ್ಮವನ್ನು ಆಚರಿಸು.

ಪ್ರಶ್ನೆ : "ಅಸಕ್ತಃ" ಪದದ ಅರ್ಥವೇನು ?

ಉತ್ತರ. ''ಅಸಕ್ತಃ'' ಪದದಿಂದ ಸಮಸ್ತ ಕರ್ಮಗಳಲ್ಲಿಯೂ ಮತ್ತು ಕರ್ಮಫಲಗಳಲ್ಲಿಯೂ ಆಸಕ್ತಿ ರಹಿತವಾಗಿರಬೇಕು. ಮುಖ್ಯವಾಗಿ ಅಸಕ್ತಃ ಅಂದರೆ ಕರ್ತೃತ್ವವಿಲ್ಲದಿರುವುದು ; ಕರ್ತೃತ್ವವನ್ನು ತ್ಯಾಗಮಾಡಿದರೆ ಫಲಕಾಮನೆಯು ತಾನೇ ಬಿಟ್ಟು ಹೋಗುತ್ತದೆ ತಾನು ಮಾಡುವವನೇ ಅಲ್ಲವೆಂದ ಮೇಲೆ ಫಲದ ಬಯಕೆಯು ಬರುವುದು ಎಲ್ಲಿಂದ ? ಮತ್ತು ಅ ೨ ಶ್ಲೋ. ೬೨ರಲ್ಲಿ ''ಸಂಗಾತ್ಸಂಜಾಯತೆ ಕಾಮಃ" ಅಂದರೆ ಸಂಗದಿಂದಲೇ ಕಾಮವೆಂದು ಹೇಳಿದೆ ಫಲೇಚ್ಛೆಯ ತ್ಯಾಗವನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಪ್ರಶ್ನೆ ''ಸತತಮ್'' ಪದದ ಭಾವವೇನು ?

ಉತ್ತರ ಹಿಂದೆ ಇದೇ ಅಧ್ಯಾಯದಲ್ಲಿ ಐದನೆಯ ಶ್ಲೋಕದಲ್ಲಿ ದೇಹಧಾರಿಯಾದ ಯಾವ ಮನುಷ್ಯನೂ ಕ್ಷಣಮಾತ್ರವೂ ಕರ್ಮಮಾಡದೆ ಇರಲಾರನೆಂದು ಹೇಳಿದೆಯಷ್ಟೆ, ಅಂದರೆ ಮನುಷ್ಯನು ನಿತ್ಯವೂ ಏನನ್ನಾದರೂ ಮಾಡುತ್ತಿರುತ್ತಾನೆ ನೀನು ತಪ್ಪದೆ ಮಾಡಬೇಕಾದ ಕರ್ಮಗಳನ್ನು ಮಾಡು ಅನಾಸಕ್ತಿಯಿಂದ ಮಾಡಲ್ಪಟ್ಟ ಕರ್ಮಗಳು ಬಂಧನಕಾರಿಯಲ್ಲ.

ಪ್ರಶ್ನೆ ಶ್ಲೋಕದಲ್ಲಿ ಕರ್ಮಪದದೊಂದಿಗೆ ''ಕಾರ್ಯಮ್'' ಎಂಬ ವಿಶೇಷಣವನ್ನು ಜೋಡಿಸಿರುವ ಕಾರಣವೇನು ?

ಉತ್ತರ ನಿನಗಾಗಿ ನಿನ್ನ ಸ್ವಭಾವ ಪರಿಸ್ಥಿತಿಗೆ ಅನುಸಾರವಾಗಿ ನಿಯತವಾದ ಕರ್ಮವನ್ನೇ ಮಾಡಬೇಕು. ಪರಧರ್ಮದ ಕರ್ಮ, ನಿಷಿದ್ಧಕರ್ಮ, ಮತ್ತು ವ್ಯರ್ಥ ಅಥವಾ ಕಾಮ್ಯಕರ್ಮಗಳನ್ನು ಮಾಡಬಾರದು.

ಪ್ರಶ್ನೆ · "ಸಮಾಚರ" – ಈ ಕ್ರಿಯೆಯ ಭಾವವೇನು ?

ಉತ್ತರ "ಆಚರ" ಎಂಬ ಕ್ರಿಯೆಯೊಂದಿಗೆ "ಸಮ್" ಎಂಬ ಉಪಸರ್ಗವನ್ನು ಜೋಡಿಸಿ, ನೀನು ಮಾಡುವ ಕರ್ಮವನ್ನು ಸಾವಧಾನದಿಂದ ವಿಧಿಪೂರ್ವಕವಾಗಿ, ತಿಳಿದು ಮಾಡಬೇಕು "ಜ್ಞಾತ್ವಾಕುರ್ವಂತು ಕರ್ಮಾಣಿ" ಮತ್ತು ಯಂತ್ರದಂತೆ ಕರ್ಮಮಾಡಿದರೆ ಪ್ರಯೋಜನವಿಲ್ಲ. ತಿಳಿಯದೆ ಯಂತ್ರದಂತೆ ಕರ್ಮಮಾಡಿದರೆ ಕರ್ಮದಿಂದ ಪರಂಪರೆಯಾಗಿ ಬರುವ ಮೋಕ್ಷವು ಬರಲಾರದು.

ಪ್ರಶ್ನೆ . ಆಸಕ್ತಿಯಿಲ್ಲದೆ ಕರ್ಮ ಮಾಡುವವನು ಪರಮಾತ್ಮ ಪ್ರಾಪ್ತಿಯನ್ನು ಮಾಡಿಕೊಳ್ಳುತ್ತಾನೆ ಅಂದರೇನು ?

ಉತ್ತರ. ಇದರಿಂದ ಕರ್ಮಯೋಗದ ಫಲವು ಸ್ಪಷ್ಟವಾಗುತ್ತದೆ ಉಪರ್ಯುಕ್ತ ಪ್ರಕಾರದಿಂದ ಆಸಕ್ತಿಯನ್ನು ಬಿಟ್ಟು ಕರ್ತವ್ಯ ಕರ್ಮಗಳನ್ನು ಮಾಡುವುದರಿಂದ ಮನುಷ್ಯನು ಇಲ್ಲಿಯೇ ಮುಕ್ತನಾಗುತ್ತಾನೆ. ಇದೇ ಕರ್ಮಯೋಗದ ಮಹತ್ವ.

ಸಂಬಂಧ ಹಿಂದಿನ ಶ್ಲೋಕದಲ್ಲಿ ಆಸಕ್ತಿಯನ್ನು ಬಿಟ್ಟು ಕರ್ಮಮಾಡು ವವನು ಮುಕ್ತನಾಗುತ್ತಾನೆ ಎಂದು ಹೇಳಿದ ವಿಷಯವನ್ನು ದೃಢಪಡಿಸು ವುದಕ್ಕಾಗಿ ಮುಂದಿನ ಶ್ಲೋಕದಲ್ಲಿ ಜನಕಾದಿಗಳ ಉದಾಹರಣೆ ಕೊಡ ಲ್ಪಡುತ್ತದೆ

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥೨೦॥**

ತಾ ಮೋಕ್ಷವನ್ನು ಪಡೆದವರೆಂದು ಪ್ರಸಿದ್ಧರಾಗಿರುವ ಜನಕ, ಅಶ್ವ ಪತಿ ಮೊದಲಾದ ಹಿಂದಿನ ರಾಜರು ಕರ್ಮವನ್ನು ಮಾಡುವುದರಿಂದಲೇ ಮೋಕ್ಷವನ್ನು ಪಡೆದವರಾದರು ಅವರನ್ನು ಜ್ಞಾನಿಗಳೆಂದು ಇಟ್ಟುಕೊಂಡರೆ ಆವರು ಇತರರಿಗೆ ದಾರಿಯನ್ನು ತೋರಿಸುವುದಕ್ಕಾಗಿ ಕರ್ಮವನ್ನು ಮಾಡು ತ್ತಲೇ ತಮ್ಮ ಆಯುಸ್ಸನ್ನು ಮುಗಿಸಿದರೆಂದು ಹೇಳಬೇಕಾಗುತ್ತದೆ. ಅವರಿನ್ನೂ ಜ್ಞಾನಿಗಳಾಗಿರಲಿಲ್ಲ ಎಂದು ಇಟ್ಟುಕೊಂಡರೆ ಜ್ಞಾನದ ಸಾಧನವಾದ ಚಿತ್ತಶುದ್ಧಿ ಗಾಗಿ ಕರ್ಮವನ್ನು ಮಾಡುತ್ತಾ ಮೋಕ್ಷವನ್ನು ಪಡೆದರೆಂದು ಹೇಳಬೇಕಾಗು ತ್ತದೆ ಅವರು ಜ್ಞಾನಿಗಳಲ್ಲದ್ದರಿಂದ ಕರ್ಮವನ್ನು ಮಾಡುತ್ತಿದ್ದರೆಂದ ಮಾತ್ರದಿಂದಲೇ ಜ್ಞಾನಿಗಳು ಕರ್ಮವನ್ನು ಬಿಡಬೇಕೆಂದು ಅರ್ಥವಲ್ಲ ಆದ್ದ ರಿಂದ ಜನರು ಅಡ್ಡದಾರಿಗೆ ಹೋಗವುದನ್ನು ತಪ್ಪಿಸುವುದಕ್ಕಾಗಿ ಚೆನ್ನಾಗಿ ಲಕ್ಷ್ಯಕ್ಕೆ ತಂದುಕೊಂಡು ಮಾಡತಕ್ಕದ್ದು

## ವಿವರಣೆ

ಪ್ರಶ್ನೆ : "ಜನಕಾದಯಃ" ಎಂಬ ಪದವು ಯಾವ ಪುರುಷರ ವಾಚಕ ವಾಗಿದೆ ? ಮತ್ತು ಅವರೂ ಸಹ "ಕರ್ಮದಿಂದಲೇ ಪರಮ ಸಿದ್ಧಿಯನ್ನು ಪಡೆದರು" ಎಂದರೇನು ?

ಉತ್ತರ : ಗೀತಾ ಉಪದೇಶದವರೆಗೆ ಜನಕರಾಜನಂತೆ ಕರ್ತೃತ್ವ ಬುದ್ಧಿ ಯನ್ನೂ ಫಲಾಸಕ್ತಿಯನ್ನೂ ಬಿಟ್ಟು ಕೇವಲ ಮೋಕ್ಷಕ್ಕಾಗಿ ಮಾಡುವ ಅಶ್ವಪತಿ, ಇಕ್ಷ್ವಾಕು, ಪ್ರಹ್ಲಾದ, ಅಂಬರೀಷ ಮೊದಲಾದ ಮಹಾಪುರುಷ

ರೆಲ್ಲರನ್ನು ಕುರಿತು ಇಲ್ಲಿ "ಜನಕಾದಯಃ" ಎಂದು ಹೇಳಿದೆ ಪೂರ್ವ ಶ್ಲೋಕದಲ್ಲಿ ಆಸಕ್ತಿಯಿಲ್ಲದ ಮನುಷ್ಯನು ಪರಮಾತ್ಮ ಪ್ರಾಪ್ತಿಯನ್ನು ಮಾಡಿಕೊಳ್ಳುತ್ತಾನೆ ಎಂಬ ವಿಷಯವನ್ನು ಪ್ರಮಾಣ ದ್ವಾರಾ ಸಿದ್ಧಮಾಡಲು ಪೂರ್ವಕಾಲದ ಪ್ರಧಾನ ಪುರುಷರೂ ಸಹ ಆಸಕ್ತಿರಹಿತರಾಗಿ ಕರ್ಮಮಾಡಿದ್ದರಿಂದ ಪರಮ ಸಿದ್ಧಿಯನ್ನು ಪಡೆದರು ಎಂದು ಹೇಳಿದ

ಸಾರಾಂಶ ಇಲ್ಲಿಯವರೆಗೆ ಆದ ಮಹಾಪುರಷರು ಆಸಕ್ತಿರಹಿತವಾದ ಕರ್ಮಯೋಗದಿಂದ ಮೋಕ್ಷವನ್ನು ಪಡೆದುಕೊಂಡರು ಶ್ರೀ ಬಸವೇಶ್ವರ ಮತ್ತು ಶ್ರೀ ವಿದ್ಯಾರಣ್ಯರೇ ಇದಕ್ಕೆ ಸಾಕ್ಷಿ ಮಹಾತ್ಮ ಗಾಂಧೀಜಿಯವರ ವಿಷಯವಂತೂ ಸರ್ವರಿಗೂ ಪ್ರತ್ಯಕ್ಷವೇ

ಪ್ರಶ್ನೆ ಪರಮಾತ್ಮನ ಪ್ರಾಪ್ತಿಯು ತತ್ವಜ್ಞಾನದಿಂದಲೇ ಆಗುತ್ತದೆ ಎಂದು ಸರ್ವ ಶಾಸ್ತ್ರಗಳೂ ಸಾರುತ್ತಿರುವಾಗ ಇಲ್ಲಿ ಆಸಕ್ತಿರಹಿತ ಕರ್ಮದಿಂದ ಭಗವತ್ಪ್ರಾಪ್ತಿಯು ಎಂಬುದು ವಿರೋಧವಲ್ಲವೇ ?

ಉತ್ತರ ವಿರೋಧವೇನೂ ಇಲ್ಲ ಆಸಕ್ತಿರಹಿತ ಕರ್ಮಾಚರಣೆಯಿಂದ ಶುದ್ಧವಾದ ಅಂತಃಕರಣವುಳ್ಳವನಿಗೆ ಸದ್ಗುರು ಕೃಪೆಯಿಂದ ತತ್ವಜ್ಞಾನವು ಉಂಟಾಗಿಯೇ ತೀರುತ್ತದೆ. ಆದ್ದರಿಂದ ಪರಂಪರೆಯಿಂದ ಆಸಕ್ತಿರಹಿತ ಕರ್ಮಾಚರಣೆಯು ಭಗವತ್ಪ್ರಾಪ್ತಿಗೆ ಉಪಾಯವೆಂದು ಹೇಳಿದ್ದು ವಿರೋಧವಲ್ಲ

ಪ್ರಶ್ನೆ "ಲೋಕಸಂಗ್ರಹ" ಅಂದರೇನು ? ಮತ್ತು ಲೋಕಸಂಗ್ರಹದ ದೃಷ್ಟಿಯಿಂದ ಕರ್ಮವನ್ನು ಮಾಡುವುದು ಉಚಿತವೆನ್ನುವುದರ ಭಾವವೇನು ?

ಉತ್ತರ ಸೃಷ್ಟಿ ಸಂಚಲನೆಯನ್ನು ಸುರಕ್ಷಿತವಾಗಿ ಇಡುವುದಕ್ಕೂ ಮತ್ತು ಸೃಷ್ಟಿಯ ವ್ಯವಸ್ಥೆಯಲ್ಲಿ ಯಾವ ಅಡಚಣೆಯೂ ಇಲ್ಲದಂತೆ ನೋಡಿಕೊಳ್ಳುವುದಕ್ಕೂ ಲೋಕಸಂಗ್ರಹವೆನ್ನುತ್ತಾರೆ ಅಂದರೆ ಸಮಸ್ತ ಪ್ರಾಣಿಗಳ ಪೋಷಣೆಯ ಜವಾಬ್ದಾರಿಯು ಮನುಷ್ಯನ ಮೇಲೆ ಇರುತ್ತದೆ. ಆದುದರಿಂದ ತನ್ನ ಸ್ವಭಾವ ಪರಿಸ್ಥಿತಿಗೆ ಅನುಸಾರವಾಗಿ ಕರ್ತವ್ಯ ಕರ್ಮಗಳನ್ನು ಆಚರಿಸಿ ಮತ್ತೊಬ್ಬರನ್ನು ತನ್ನ ಆದರ್ಶ ದ್ವಾರಾ ದುರ್ಗುಣ–ದುರಾಚಾರದಿಂದ ತಿರುಗಿಸಿ ಸ್ವಧರ್ಮದಲ್ಲಿ ತೊಡಗಿಸುವುದೇ ಲೋಕಸಂಗ್ರಹ.

ಇಲ್ಲಿ ಅರ್ಜುನನಿಗೆ ಲೋಕಸಂಗ್ರಹದ ದೃಷ್ಟಿಯಿಂದ ಕರ್ಮವನ್ನು ಮಾಡುವುದು ಉಚಿತವೆಂದು ತಿಳಿಸಿ ಮುಕ್ತಿಯನ್ನು ಬಯಸುವವರು ಆಸಕ್ತಿ ರಹಿತವಾಗಿ ಕರ್ಮವನ್ನು ಮಾಡುವುದು ಸರಿಯೆ, ಇದಲ್ಲದೆ ಲೋಕಸಂಗ್ರಹ ಕ್ಕಾಗಿಯೂ ಮನುಷ್ಯನು ಕರ್ಮ ಮಾಡುವುದು ಉಚಿತವೆಂಬ ಭಾವವು ಸೂಚಿಸಲ್ಪಟ್ಟಿದೆ

ಪ್ರಶ್ನೆ : ಲೋಕಸಂಗ್ರಹಕ್ಕಾಗಿ ಕರ್ಮವು ಕೇವಲ ಜ್ಞಾನಿಗಳಿಂದ ಆಗುವುದೇ ಅಥವಾ ಸಾಧಕರಿಂದಲೂ ಆಗುವುದೇ ?

ಉತ್ತರ. ಜ್ಞಾನಿಗೆ ಯಾವ ಕರ್ತವ್ಯವೂ ಇರುವುದಿಲ್ಲ ಆದುದರಿಂದ ಜ್ಞಾನಿಯ ಕರ್ಮಗಳೆಲ್ಲವೂ ಲೋಕಸಂಗ್ರಹವೇ ಜ್ಞಾನಿಯನ್ನು ಆದರ್ಶ ವಾಗಿಟ್ಟುಕೊಂಡು ಸಾಧಕನು ಮಾಡುವುದೆಲ್ಲ ಲೋಕಸಂಗ್ರಹವೇ ಇದು ಪೂರ್ಣರೂಪದಿಂದ ಲೋಕಸಂಗ್ರಹ ಕರ್ಮವೆಂದು ಹೇಳಲಾಗುವುದಿಲ್ಲ ಯಾಕೆಂದರೆ ಅಜ್ಞಾನವು ಅತ್ಯಂತ ನಿವೃತ್ತಿಯಾಗುವವರೆಗೂ ಅಲ್ಪಸ್ವಲ್ಪ ಸ್ವಾರ್ಥವು ಇದ್ದೇ ಇರುತ್ತದೆ ಸ್ವಾರ್ಥದ ಅಂಶವಿರುವವರೆಗೆ ಪೂರ್ಣವಾಗಿ ಲೋಕಸಂಗ್ರಹವು ಸಂಭವಿಸುವುದಿಲ್ಲ

ಪ್ರಶ್ನೆ ಜ್ಞಾನಿಗೆ ಯಾವ ಕರ್ತವ್ಯವೂ ಇಲ್ಲ ಅವನ ದೃಷ್ಟಿಯಲ್ಲಿ ಕರ್ಮಕ್ಕೆ ಮಹತ್ವವೇ ಇಲ್ಲ. ಎಂದ ಮೇಲೆ ಅವನು ಮಾಡುವ ಲೋಕ ಸಂಗ್ರಹವು ಬರೀ ತೋರಿಕೆಯದು ಆಗುವುದಿಲ್ಲವೇ ?

ಉತ್ತರ ಜ್ಞಾನಿಗೆ ಯಾವ ಕರ್ತವ್ಯವೂ ಇಲ್ಲವಾದರೂ ಅವನು ಮತ್ತೊಬ್ಬರಿಗಾಗಿ ಮಾಡುವ ಕರ್ಮವು ಕೇವಲ ತೋರಿಕೆಯದೆಂದು ಭಾವಿಸ ಬಾರದು. ಮನಸ್ಸಿನಲ್ಲಿ ಕರ್ಮದ ಮಹತ್ವವಿಲ್ಲದೆ ಮೇಲೆ ಮೇಲೆ ತೋರಿಕೆಯ ಕರ್ಮ ಮಾಡುವುದೆಂದರೆ ಅದೊಂದು ಪ್ರಕಾರದ ದಂಭವೆನಿಸುತ್ತದೆ. ಜ್ಞಾನಿ ಯಲ್ಲಿ ದಂಭವಿರಲಾರದು "ಅತಏವ" ಜ್ಞಾನಿಯು ಮಾಡುವುದನ್ನೆಲ್ಲಾ ಲೋಕಸಂಗ್ರಹಾರ್ಥವೇ ಮತ್ತು ಅತಿ ಮಹತ್ವಪೂರ್ಣವೆಂದು ತಿಳಿದು ಮಾಡು ತ್ತಾನೆ. ಜ್ಞಾನಿಯಲ್ಲಿ ದಂಭವೂ ಇರಲಾರದು, ಆಸಕ್ತಿಯಂತೂ ಕಿಂಚಿನ್ಮಾ

ತ್ರವೂ ಇರುವುದಿಲ್ಲ ಅಹಂಕಾರವಂತೂ ಅವನ ಹತ್ತಿರ ಸುಳಿಯಲಾರದು. ಅವನ ಈ ಆಂತರ್ಯದ ಭಾವವನ್ನು ಯಾರೂ ತಿಳಿಯಲಾರರು ಆದುದ ರಿಂದಲೇ ಅವನು ವಿಲಕ್ಷಣ ಮನುಷ್ಯನೆಂದು ಹೇಳಿಸಿಕೊಳ್ಳುತ್ತಾನೆ.

ಸಂಬಂಧ ಪೂರ್ವಶ್ಲೋಕದಲ್ಲಿ ಲೋಕಸಂಗ್ರಹದ ದೃಷ್ಟಿಯಿಂದ ಕರ್ಮ ಮಾಡುವುದು ಉಚಿತವೆಂದು ಹೇಳಿದೆ. ಅಂದಮೇಲೆ ಕರ್ಮ ಮಾಡು ವುದರಿಂದ ಅದು ಲೋಕಸಂಗ್ರಹ ಹೇಗೆ ಆಗುತ್ತದೆ? ಎಂಬ ವಿಷಯವು ಮುಂದಿನ ಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧ ॥**

ತಾ ದೊಡ್ಡವನೆನಿಸಿಕೊಂಡಿರುವವನು ಯಾವ ಯಾವ ಕರ್ಮಗಳನ್ನು ಮಾಡುತ್ತಾನೋ ಉಳಿದ ಜನರೂ ಆ ಕರ್ಮಗಳನ್ನೇ ಮಾಡುತ್ತಾರೆ. ದೊಡ್ಡ ವನೆನಿಸಿಕೊಂಡವನು ಯಾವುದನ್ನು ಸರಿಯಾದದ್ದೆಂದು ತಿಳಿದು ಮಾಡು ತ್ತಾನೋ ಅದನ್ನೇ ಜನರೂ ಹಿಂಬಾಲಿಸುತ್ತಾರೆ

## ವಿವರಣೆ

ಪ್ರಶ್ನೆ ಇಲ್ಲಿರುವ "ಶ್ರೇಷ್ಠ" ಎಂಬ ಪದವು ಯಾವ ಮನುಷ್ಯನ ವಾಚಕವಾಗಿದೆ ?

ಉತ್ತರ . ಯಾವನು ದೇಹದಲ್ಲಿರುತ್ತಾ ತಾನು ಬ್ರಹ್ಮವೆಂದು ತಿಳಿದಿರು ತ್ತಾನೋ, ತನ್ನ ಆಚರಣೆಯಿಂದ ಧರ್ಮಾತ್ಮನೂ ವಿಖ್ಯಾತನೂ ಆಗಿರುವನೋ, ಮತ್ತು ಜಗತ್ತಿನ ಅಧಿಕಾಂಶ ಜನರಿಗೆ ಯಾರಲ್ಲಿ ಶ್ರದ್ಧೆಯುಂಟಾಗಿದೆಯೋ ಅವನು ಶ್ರೇಷ್ಠ ವ್ಯಕ್ತಿ.

ಪ್ರಶ್ನೆ . ಶ್ರೇಷ್ಠ ವ್ಯಕ್ತಿಯು ಮಾಡುವುದನ್ನೇ ಇತರೆಯವರು ಮಾಡು ತ್ತಾರೆ ಎಂದರೇನು ?

ಉತ್ತರ · ಜೀವನು ಅನುಕರಣ ಶೀಲನು. ಮುಂದಿನವನು ಏನು ಮಾಡುತ್ತಾನೋ ಹಿಂದಿನವನೂ ಅದನ್ನೇ ಮಾಡುತ್ತಾನೆ. ತಿಳಿದು ಮಾಡು

ಉತ್ತರ : ಮನುಷ್ಯನ ಸಂಬಂಧವು ಕೇವಲ ಮೃತ್ಯುಲೋಕದೊಂದಿಗೆ; ಅಂದರೆ ಧರ್ಮ, ಅರ್ಥ, ಕಾಮ, ಮೋಕ್ಷ ಈ ನಾಲ್ಕು ಪುರುಷಾರ್ಥಗಳ ಸಿದ್ಧಿಗಾಗಿ ಮನುಷ್ಯನು ಈ ಲೋಕದಲ್ಲಿ ಕರ್ಮ ಮಾಡಬೇಕಾಗುತ್ತದೆ. ಆದರೆ ನಾನು ಎಲ್ಲರಂತೆ ಸಾಧಾರಣ ಮನುಷ್ಯನಲ್ಲ ಸ್ವಯಂ ಸರ್ವರ ಕರ್ತವ್ಯವನ್ನು ವಿಧಾನ ಮಾಡುವ ಪರಮೇಶ್ವರನೇ ನಾನು ನಾನು ಸ್ವರ್ಗ, ಮರ್ತ್ಯ, ಪಾತಾಳ ಮೂರು ಲೋಕದಲ್ಲಿಯೂ ಇರುತ್ತೇನೆ ನನಗೆ ಮೂರು ಲೋಕದಲ್ಲಿಯೂ ಕರ್ತವ್ಯ ಬುದ್ಧಿಯಿಂದ ಮಾಡಬೇಕಾದದ್ದೇನೂ ಇಲ್ಲ

ಪ್ರಶ್ನೆ ನನಗೆ ಮೂರು ಲೋಕದಲ್ಲಿಯೂ ಪ್ರಾಪ್ತಿ ಮಾಡಿಕೊಳ್ಳುವ ವಸ್ತುವಿಲ್ಲ ಎಂದರೇನು ?

ಉತ್ತರ . ಈ ಲೋಕದ ಮಾತು ಒಂದು ಕಡೆಗೆ ಇರಲಿ, ಮೂರು ಲೋಕದಲ್ಲಿಯೂ ನನಗೆ ಪ್ರಾಪ್ತವಾಗದ, ದೊರಕಿಸಬಹುದಾದ ವಸ್ತುವಿಲ್ಲ ಯಾಕೆಂದರೆ ನಾನು ಸರ್ವೇಶ್ವರನೂ ಆಪ್ತಕಾಮನೂ ಆಗಿರುತ್ತೇನೆ ಒಂದು ಮನೆಯ ಯಜಮಾನನಿಗೆ ಆ ಮನೆಯಲ್ಲಿರುವ ವಸ್ತುಗಳೆಲ್ಲ ಪ್ರಾಪ್ತವಾಗಿರುವಂತೆ ಮೂರು ಲೋಕದ ಯಜಮಾನನಾದ ನನಗೆ ಮೂರು ಲೋಕದಲ್ಲಿರುವ ವಸ್ತುಗಳು ನಿತ್ಯಪ್ರಾಪ್ತವೇ

ಪ್ರಶ್ನೆ : ಆದರೂ ನಾನು ಕರ್ಮದಲ್ಲಿ ವರ್ತಿಸುತ್ತೇನೆ ಎಂದರೇನು ?

ಉತ್ತರ : ನನಗೆ ಯಾವ ವಸ್ತುವಿನ ಅವಶ್ಯಕತೆಯೂ ಇಲ್ಲ ನನಗಾಗಿ ಯಾವ ಕರ್ತವ್ಯವೂ ಉಳಿದಿರುವುದಿಲ್ಲ ಆದರೂ ನಾನು ಲೋಕಸಂಗ್ರಹದ ದೃಷ್ಟಿಯಿಂದ ಎಲ್ಲರ ಮೇಲೂ ದಯೆಯಿಂದ ಕರ್ಮವನ್ನು ಮಾಡುತ್ತಿದ್ದೇನೆ ಕರ್ಮತ್ಯಾಗವು ನನಗೆ ಇಷ್ಟವಿಲ್ಲ ಆದುದರಿಂದ ಯಾರೇ ಆಗಲಿ ನನಗೆ ಭೋಗವು ಬೇಕಿಲ್ಲ, ನನಗೆ ಕರ್ಮಫಲದ ಅವಶ್ಯಕತೆಯಿಲ್ಲ, ಆದುದರಿಂದ ನಾನು ಕರ್ಮವನ್ನು ಏಕೆ ಮಾಡಲಿ? ಅಲ್ಲದೆ ನನಗೆ ಪರಮ ಪದದ ಪ್ರಾಪ್ತಿಯಾಗಿಬಿಟ್ಟದೆ, ನಾನು ಕರ್ಮವನ್ನು ಏಕೆ ಮಾಡಲಿ ? ಎಂದು ತಿಳಿದು ಕರ್ಮವನ್ನು ತ್ಯಾಗ ಮಾಡಬಾರದು ಇತರೆ ಕಾರಣಗಳಿಂದ ಕರ್ಮ ಮಾಡುವ ಅವಶ್ಯಕತೆ ಇಲ್ಲದಿದ್ದರೂ ಮನುಷ್ಯನು ಲೋಕಸಂಗ್ರಹದ ದೃಷ್ಟಿಯಿಂದ ಕರ್ಮವನ್ನು ಮಾಡಲೇಬೇಕು.

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ |**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ || ೨೩ ||**

ತಾ ಅರ್ಜುನನೇ ಕೇಳು ನಾನು ಆಲಸ್ಯವಿಲ್ಲದವನಾಗಿ ಕರ್ಮ ದಲ್ಲಿ ತೊಡಗದೆ ಇದ್ದರೆ ಮನುಷ್ಯರು ಎಲ್ಲಾ ಬಗೆಯಿಂದಲೂ ದೊಡ್ಡವನೆನಿಸಿ ಕೊಂಡಿರುವ ನನ್ನ ದಾರಿಯನ್ನು ಹಿಂಬಾಲಿಸುತ್ತಾರೆ

ಪ್ರಶ್ನೆ . "ಹಿ" ಪದದ ಅರ್ಥವೇನು ?

ಉತ್ತರ ಪೂರ್ವ ಶ್ಲೋಕದಲ್ಲಿ ಶ್ರೀಕೃಷ್ಣನು ನನಗೆ ಮೂರೂ ಲೋಕ ದಲ್ಲಿ ಕರ್ತವ್ಯದ ಅಭಾವವಿದ್ದರೂ ನಾನು ಕರ್ಮವನ್ನು ಮಾಡುತ್ತೇನೆ – ಎಂದು ಹೇಳಿರುತ್ತಾನೆ ಹೀಗಿದ್ದರೆ, ಕರ್ತವ್ಯವಿಲ್ಲದಿದ್ದರೆ ಕರ್ಮ ಮಾಡುವ ಕಾರಣ ವೇನು ? ಎಂಬ ಶಂಕೆಗೆ ಶ್ರೀಕೃಷ್ಣನು ಎರಡು ಶ್ಲೋಕಗಳಲ್ಲಿ ಸಮಾಧಾನ ಹೇಳಿರುತ್ತಾನೆ. ಆ ವಿಷಯದ ದ್ಯೋತಕವೇ "ಹಿ" ಎಂಬ ಪದದ ಅರ್ಥ.

ಪ್ರಶ್ನೆ "ಯದಿ" ಮತ್ತು "ಜಾತು" ಈ ಎರಡು ಪದಗಳ ಅರ್ಥವೇನು ?

ಉತ್ತರ : ನನ್ನ ಅವತಾರವು ಧರ್ಮಸ್ಥಾಪನೆಗಾಗಿಯೇ ಆಗಿದೆ. ಈ ಕಾರಣದಿಂದ ನಾನು ಸರ್ವ ಕಾಲದಲ್ಲಿಯೂ ಸಾವಧಾನದಿಂದ ಸಾಂಗೋಪಾಂಗ ವಾಗಿ ಸಮಸ್ತ ಕರ್ಮಗಳನ್ನು ಮಾಡದಿದ್ದರೆ ಮತ್ತು ಕರ್ಮಗಳನ್ನು ಅವ ಹೇಳನ ಮಾಡಿದರೆ ದೊಡ್ಡ ಹಾನಿಯಾಗುತ್ತದೆ. ಯಾಕೆಂದರೆ ಸಂಪೂರ್ಣ ಜಗತ್ತಿನ ಕರ್ತನೂ, ಹರ್ತನೂ ಮತ್ತು ಸಂಚಾಲಕನೂ ಹಾಗೆಯೇ ಮರ್ಯಾದಾ ಪುರುಷೋತ್ತಮನೂ ಆಗಿದ್ದೇನೆ. ಹೀಗಿರುವ ನಾನು ಆಲಸ್ಯ ಮಾಡಿದರೆ ಸೃಷ್ಟಿ ಚಕ್ರದಲ್ಲಿ ಆತಂಕವುಂಟಾಗುತ್ತದೆ.

ಪ್ರಶ್ನೆ . ಮನುಷ್ಯನು ಎಲ್ಲಾ ವಿಧದಿಂದ ನನ್ನನ್ನೇ ಅನುಸರಿಸುತ್ತಾನೆ ಎಂದರೇನು ?

ಉತ್ತರ . ಇದರಿಂದ ಶ್ರೀಕೃಷ್ಣನು ಅನೇಕ ಜನರು ನನ್ನನ್ನು ಅತಿ ಶಕ್ತಿಶಾಲಿಯೆಂದೂ, ಸರ್ವಶ್ರೇಷ್ಠನೆಂದೂ ತಿಳಿದಿರುತ್ತಾರೆ ಬೇರೆ ಕೆಲವರು ಮರ್ಯಾದಾ ಪುರುಷೋತ್ತಮನೆಂದೂ ತಿಳಿದಿರುತ್ತಾರೆ. ಆದುದರಿಂದ ನಾನು

ಯಾವ ಕರ್ಮವನ್ನು ಹೇಗೆ ಮಾಡುವೆನೋ ನನ್ನನ್ನು ನೋಡಿ ಜನರು ಅದೇ ಕರ್ಮವನ್ನು ಹಾಗೆಯೇ ಮಾಡುತ್ತಾರೆ ಅಂದರೆ ಸರ್ವರೂ ನನ್ನ ನಕಲು ಮಾಡುತ್ತಾರೆ ಈ ಪರಿಸ್ಥಿತಿಯಲ್ಲಿ ನಾನು ಕರ್ತವ್ಯವನ್ನು ಅವಹೇಳನ ಮಾಡಿದರೆ ಅಥವಾ ಕರ್ಮದಲ್ಲಿ ಸಾವಧಾನದಿಂದ ವಿಧಿಪೂರ್ವಕ ಆಚರಿಸದೆ ಇದ್ದರೆ ಜನರು ನನ್ನನ್ನು ನೋಡಿ ಅದರಂತೆ ಆಚರಿಸಿ ಎಲ್ಲರೂ ಇಹ ಪರ ಸುಖಗಳಿಂದ ವಂಚಿತರಾಗುತ್ತಾರೆ "ಅತಏವ" ಜನರಿಗೆ ಕರ್ಮ ಮಾಡುವ ವಿಧಿಯನ್ನು ತಿಳಿಸುವುದಕ್ಕಾಗಿ ನಾನು ಸಮಸ್ತ ಕರ್ಮಗಳನ್ನು ವಿಧಿವತ್ ಆಚರಿಸುತ್ತೇನೆ ಎಂಬ ಭಾವವನ್ನು ಪ್ರಕಟ ಮಾಡಿರುತ್ತಾನೆ

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥೨೪॥**

ತಾತ್ಪರ್ಯ ಎಲ್ಲರನ್ನು ಉದ್ಧಾರ ಮಾಡಬೇಕೆಂದಿರುವ ನಾನು ನನ್ನ ಕರ್ತವ್ಯವನ್ನು ಮಾಡದೆ ಹೋದರೆ ಎಲ್ಲರೂ ನನ್ನಂತೆ ಕರ್ಮ ಬಿಡುವುದರಿಂದ ಕರ್ಮದಿಂದ ಹುಟ್ಟಿದ ಈ ಲೋಕಗಳು ಕರ್ಮಗಳೊಡನೆಯೇ ನಾಶವಾಗುವುವು ಇದರಿಂದ ಜಗತ್ತೆಲ್ಲ ಅನಾಯಕತ್ವಕ್ಕೆ ಇಳಿದು ಎಲ್ಲರೂ ತಮ್ಮ ತಮ್ಮ ಸ್ವಾರ್ಥವನ್ನು ಮಾತ್ರ ನೋಡಿ ನಡೆಯುವುದರಿಂದ ಬೆರಿಕೆಯ ಜಾತಿ ಹುಟ್ಟುವುದಕ್ಕೂ ಕಾರಣವಾಗುವೆನು. ಇಷ್ಟೇ ಅಲ್ಲ, ಇದರಿಂದ ಈ ಜನರನ್ನೆಲ್ಲಾ ಕೊಂದವನೂ ಆಗುವೆನು ಹೇಗೆಂದರೆ ಜನರೆಲ್ಲ ಮನುಷ್ಯತ್ವಕ್ಕೆ ಸಾರ್ಥಕವಾದ ಧರ್ಮವನ್ನು ಕಳೆದುಕೊಳ್ಳುವುದರಿಂದ ಅವರ ಬಾಳು ವ್ಯರ್ಥವಾಗುವುದು.

## ವಿವರಣೆ

ಪ್ರಶ್ನೆ ಈ ಶ್ಲೋಕದಲ್ಲಿ "ಒಂದು ಪಕ್ಷ ನಾನು ಕರ್ಮವನ್ನು ಮಾಡದಿದ್ದರೆ" ಎಂದು ಹೇಳುವ ಆವಶ್ಯಕತೆ ಏನು ? ಯಾಕೆಂದರೆ ಪೂರ್ವ ಶ್ಲೋಕದಲ್ಲಿ "ಒಂದು ಪಕ್ಷ ನಾನು ಸಾವಧಾನವಾಗಿ ಕರ್ಮದಲ್ಲಿ ವರ್ತಿಸದಿದ್ದರೆ" ಎಂದು ಹೇಳಿರಲಿಲ್ಲವೆ ? ಇದು ಪುನರುಕ್ತಿ ದೋಷವಲ್ಲವೆ ?

ಉತ್ತರ ಪೂರ್ವ ಶ್ಲೋಕದಲ್ಲಿ "ಒಂದು ಪಕ್ಷ ನಾನು ಸಾವಧಾನ

ವಾಗಿ ಕರ್ಮದಲ್ಲಿ ವರ್ತಿಸದಿದ್ದರೆ" ಎಂಬ ವಾಕ್ಯಾಂಶದಲ್ಲಿಯಾದರೋ "ಸಾವಧಾನದಿಂದ ವಿಧಿಪೂರ್ವಕ ಕರ್ಮ ಮಾಡದಿದ್ದರೆ" ಆಗುವ ನಷ್ಟವನ್ನು ನಿರೂಪಿಸಿದೆ. ಈ ಶ್ಲೋಕದಲ್ಲಿ "ಒಂದು ಪಕ್ಷ ಕರ್ಮ ಮಾಡದಿದ್ದರೆ'' ಎಂದು ಹೇಳಿದೆ ಈ ವಾಕ್ಯಾಂಶದಲ್ಲಿ ಕರ್ಮವನ್ನು ಮಾಡದಿದ್ದರೆ ಅಂದರೆ ಕರ್ಮತ್ಯಾಗ ಮಾಡಿದರೆ ಆಗುವ ಹಾನಿಯೂ ನಿರೂಪಿಸಲ್ಪಟ್ಟಿದೆ ಆದುದರಿಂದ ಇಲ್ಲಿ ಪುನರುಕ್ತಿ ದೋಷವಿಲ್ಲ ಎರಡೂ ಶ್ಲೋಕಗಳಲ್ಲಿ ಪ್ರತ್ಯೇಕ ಎರಡು ಮಾತುಗಳು ನಿರೂಪಿಸಲ್ಪಟ್ಟಿವೆ

ಪ್ರಶ್ನೆ : ಒಂದು ಪಕ್ಷ ನಾನು ಕರ್ಮ ಮಾಡದಿದ್ದರೆ ಎಲ್ಲಾ ಮನುಷ್ಯರು ನಷ್ಟ ಭ್ರಷ್ಟರಾಗುತ್ತಾರೆ ಎಂಬುದರ ಅಭಿಪ್ರಾಯವೇನು ?

ಉತ್ತರ · ನಾನು ಕರ್ತವ್ಯ ಕರ್ಮವನ್ನು ಮಾಡದೆ ಇದ್ದರೆ ಆ ಶಾಸ್ತ್ರ ವಿಹಿತ ಕರ್ಮಗಳನ್ನು ವ್ಯರ್ಥವೆಂದು ತಿಳಿದು ಇತರೆಯವರೂ ಸಹ ನನ್ನನ್ನು ನೋಡಿ ಅವರೂ ತ್ಯಜಿಸುವರು ಮತ್ತು ಅವರೆಲ್ಲ ರಾಗದ್ವೇಷಕ್ಕೆ ಒಳಗಾಗಿ ಅಂದರೆ ಪ್ರಕೃತಿ ಪ್ರವಾಹಕ್ಕೆ ಬಿದ್ದು ಇಚ್ಛೆಯಂತೆ ನೀಚ ಕರ್ಮವನ್ನು ಮಾಡತೊಡಗುತ್ತಾರೆ. ಅದರಂತೆ ಒಬ್ಬರು ಮತ್ತೊಬ್ಬರನ್ನು ಅನುಸರಿಸಿ ಎಲ್ಲರೂ ಸ್ವಾರ್ಥಪರಾಯಣರೂ, ಭ್ರಷ್ಟಾಚಾರಿಗಳೂ, ಸ್ವೇಚ್ಛಾಚಾರಿಗಳೂ ಆಗುತ್ತಾರೆ. ಹೀಗಾಗುವುದರಿಂದ ಅವರು ಸಂಸಾರಿಕ ಭೋಗಗಳಲ್ಲಿ ಆಸಕ್ತರಾಗಿ ತಮ್ಮ ಸ್ವಾರ್ಥ ಸಿದ್ಧಿಗಾಗಿ ಒಬ್ಬರು ಮತ್ತೊಬ್ಬರ ಹಾನಿಯನ್ನು ಲಕ್ಷಿಸದೆ ಅನ್ಯಾಯ ಪೂರ್ವಕವಾಗಿ ಶಾಸ್ತ್ರಕ್ಕೆ ವಿರುದ್ಧವಾದ ಲೋಕ ನಾಶಕರವಾದ ಪಾಪ ಕರ್ಮವನ್ನು ಮಾಡಲಾರಂಭಿಸುತ್ತಾರೆ. ಇದರಿಂದ ಅವರ ಮನುಷ್ಯ ಜನ್ಮವು ಭ್ರಷ್ಟವಾಗಿಹೋಗುತ್ತದೆ. ಸತ್ತ ನಂತರ ಅವರಿಗೆ ನೀಚ ಜನ್ಮವು ತಪ್ಪಲಾರದು ಎಂಬ ಭಾವವನ್ನು ಶ್ರೀಕೃಷ್ಣನು ಪ್ರಕಟಿಸಿರುತ್ತಾನೆ.

ಪ್ರಶ್ನೆ . "ನಾನು ಸಂಕರತೆಯನ್ನುಂಟುಮಾಡುವವನಾಗುವೆನು'' ಎಂದರೇನು ?

ಉತ್ತರ ಇಲ್ಲಿಯ "ಸಂಕರತ" ಎಂಬ ಪದಕ್ಕೆ ಸರ್ವಪ್ರಕಾರದ ಸಂಕರತೆಯೆಂದು ತಿಳಿಯಬೇಕು ವರ್ಣ, ಆಶ್ರಮ, ಜಾತಿ, ಸಮಾಜ, ಸ್ವಭಾವ, ದೇಶ, ಕಾಲ, ರಾಷ್ಟ್ರ ಮತ್ತು ಪರಿಸ್ಥಿತಿಯನ್ನನುಸರಿಸಿ ಎಲ್ಲರೂ ತಮ್ಮ ತಮ್ಮ

ಧರ್ಮವನ್ನು ಪಾಲಿಸಬೇಕಾಗುತ್ತವೆ ಹೀಗೆ ಮಾಡದೆ ಇರುವುದರಿಂದ ಎಲ್ಲೆಲ್ಲಿಯೂ ಅವ್ಯವಸ್ಥೆಯೇ ಉಂಟಾಗುತ್ತದೆ ಸರ್ವ ರಂಗದಲ್ಲಿಯೂ ಸಂಕರ ಉಂಟಾಗುತ್ತದೆ ಅಂದರೆ ಎಲ್ಲವೂ ಒಂದರಲ್ಲಿ ಮಿಶ್ರಣವಾಗುತ್ತದೆ. ಈ ಕಾರಣದಿಂದ ಎಲ್ಲರೂ ತಮ್ಮ ತಮ್ಮ ಕರ್ತವ್ಯದಿಂದ ಭ್ರಷ್ಟರಾಗಿ ನೀಚ ಸ್ಥಿತಿಗೆ ಇಳಿಯುತ್ತಾರೆ ಬರಬರುತ್ತಾ ಇದರಿಂದ ಮನುಷ್ಯತ್ವವೇ ನಷ್ಟ ವಾಗುತ್ತದೆ ಶ್ರೀಕೃಷ್ಣನು ನಾನು ನನ್ನ ಕರ್ತವ್ಯ ಕರ್ಮ ತ್ಯಜಿಸಿದರೆ ನನ್ನ ಆದರ್ಶ ದ್ವಾರಾ ಇವರೂ ಸಹ ತಮ್ಮ ತಮ್ಮ ಕರ್ತವ್ಯ ಭ್ರಷ್ಟರಾಗುವುದರಿಂದ ನಾನು ಸಂಕರ ಕರ್ತನಾಗುವೆನೆಂಬ ಭಾವವನ್ನು ಪ್ರಕಟ ಮಾಡಿರುತ್ತಾನೆ

ಪ್ರಶ್ನೆ . ಈ ಸಮಸ್ತ ಪ್ರಜೆಗಳನ್ನೂ ನಷ್ಟ ಮಾಡುವವನಾಗುತ್ತೇನೆ ಎಂದರೇನು ?

ಉತ್ತರ ಸಂಕರತೆಯು ಹಬ್ಬಿದಾಗ ಮನುಷ್ಯನು ಭೋಗಪರಾಯಣ ನಾಗಿ ಮತ್ತು ಸ್ವಾರ್ಥಾಂಧನಾಗಿ ಅನೇಕ ಸಾಧನಗಳಿಂದ ಒಬ್ಬರು ಮತ್ತೊಬ್ಬ ರನ್ನು ನಾಶ ಮಾಡಲು ಆರಂಭಿಸುತ್ತಾರೆ ತನ್ನ ಅತ್ಯಂತ ಕ್ಷುದ್ರ ಹಾಗೂ ಕ್ಷಣಿಕ ವಿಷಯಗಳ ಉಪಭೋಗಕ್ಕಾಗಿ ಮತ್ತೊಬ್ಬರನ್ನು ನಾಶ ಮಾಡುವುದ ರಲ್ಲಿ ಹಿಂದು ಮುಂದು ನೋಡುವುದೇ ಇಲ್ಲ. ಈ ರೀತಿ ಅತ್ಯಾಚಾರ ಬೆಳೆಯು ವುದರಿಂದ ಅದರೊಂದಿಗೆ ಹೊಸ ಹೊಸ ದೈವೀ ವಿಪತ್ತುಗಳು ಬರತೊಡಗುತ್ತವೆ. ಇದರಿಂದ ಸಮಸ್ತ ಪ್ರಾಣಿಗಳಿಗೆ ಅವಶ್ಯಕವಾದ ಆಹಾರ ಮೊದಲಾದವುಗಳು ನಷ್ಟವಾಗಿ ನಾಲ್ಕೂ ದಿಕ್ಕಿನಿಂದ ಮಹಾಮಾರಿ, ಅನಾವೃಷ್ಟಿ, ಜಲಪ್ರಳಯ, ಕ್ಷಾಮ, ಅಗ್ನಿ, ಕೋಪ, ಭೂಕಂಪ ಮತ್ತು ಉಲ್ಕಾಪಾತಾದಿ ಉತ್ಪಾತ ಗಳು ಆರಂಭಿಸುತ್ತವೆ. ಇದರ ಫಲವು ಪ್ರಜಾನಾಶವಲ್ಲದೆ ಮತ್ತೇನು ? ಈ ಕಾರಣದಿಂದ “ನಾನು ಸಮಸ್ತ ಪ್ರಜೆಗಳನ್ನೂ ನಾಶ ಮಾಡುವವನಾಗುತ್ತೇನೆ” ಎಂದು ಶ್ರೀ ಕೃಷ್ಣನು ಹೇಳಿರುತ್ತಾನೆ

ಸಂಬಂಧ ಈ ಕಾರಣದಿಂದ ತಿಳುವಳಿಕೆಯುಳ್ಳವರು ಏನು ಮಾಡ ಬೇಕೆಂಬುದನ್ನು ಮುಂದಿನ ಶ್ಲೋಕದಲ್ಲಿ ಪ್ರತಿಪಾದಿಸಿದೆ.

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥೨೫॥**

ತಾತ್ಪರ್ಯ ಅರ್ಜುನನೇ ಕೇಳು ಕರ್ಮದಲ್ಲಿ ನಾನು ಮಾಡುವವ ನೆಂಬ ಅಭಿಮಾನವನ್ನು, ಸ್ವರ್ಗದ ಬಯಕೆಯನ್ನು ಹೊಂದಿ ಆತ್ಮಸ್ವರೂಪವನ್ನ ರಿಯದವರು ಮಾಡಿದಂತೆ ಆತ್ಮಸ್ವರೂಪವನ್ನರಿತವರು ಜನರಿಗೆ ಮೇಲುಪಂಕ್ತಿ ಗಾಗಿ ಮಾಡಬೇಕೆನ್ನುವವನಾಗಿ, ನಾನು ಮಾಡುವೆನೆಂಬ ಅಭಿಮಾನವೂ ನನಗೊಂದು ಫಲವಾಗಬೇಕೆಂಬ ಬಯಕೆಯು ಇಲ್ಲದವನಾಗಿ ಮಾಡಬೇಕು.

## ವಿವರಣೆ

ಪ್ರಶ್ನೆ ಈ ಶ್ಲೋಕದಲ್ಲಿ ಬಂದಿರುವ "ಕರ್ಮಣಿ" ಎಂಬ ಪದವು ಯಾವ ಕರ್ಮದ ವಾಚಕವಾಗಿದೆ ?

ಉತ್ತರ : ತಮ್ಮ ತಮ್ಮ ವರ್ಣ, ಆಶ್ರಮ, ಸ್ವಭಾವವನ್ನು ಮತ್ತು ಪರಿಸ್ಥಿತಿಗೆ ಅನುಸಾರವಾದ ಶಾಸ್ತ್ರವಿಹಿತವಾದ ಕರ್ತವ್ಯ ಕರ್ಮವನ್ನು "ಕರ್ಮಣಿ" ಎಂದು ಕರೆದಿದೆ. ಯಾಕೆಂದರೆ ಶ್ರೀಕೃಷ್ಣನು ಅಜ್ಞಾನಿಗಳನ್ನು ಆ ಕರ್ಮದಲ್ಲಿ ತೊಡಗಿಸುವ ಆದೇಶವನ್ನು ಕೊಡುತ್ತಾನೆ. ಅಲ್ಲದೆ ಜ್ಞಾನಿ ಗಳಿಗೂ ಅದೇ ರೀತಿ ಕರ್ಮ ಮಾಡಲು ಪ್ರೇರೇಪಿಸುತ್ತಾನೆ. ಆದುದರಿಂದ "ಕರ್ಮಣಿ" ಅಂದರೆ ಇದರಲ್ಲಿ ನಿಷಿದ್ಧ ಕರ್ಮ ಮತ್ತು ವ್ಯರ್ಥ ಕರ್ಮದ ಸಮಾವೇಶವಿಲ್ಲವೆಂದು ತೋರುತ್ತದೆ.

ಪ್ರಶ್ನೆ · "ಕರ್ಮಣಿಸಕ್ತಾಃ" ವಿಶೇಷಣದಿಂದ ಕೂಡಿದ "ಅವಿದ್ವಾಂಸಃ" ಎಂಬ ಪದವು ಯಾವ ತರಗತಿಯ ಅಜ್ಞಾನಿಗಳಿಗೆ ಸೇರಿದ್ದು ?

ಉತ್ತರ. ಉಪರ್ಯುಕ್ತ ವಿಶೇಷಣದಿಂದ ಕೂಡಿದ "ಅವಿದ್ವಾಂಸಃ" ಎಂಬ ಪದವು ಶಾಸ್ತ್ರಗಳಲ್ಲಿ, ಶಾಸ್ತ್ರವಿಹಿತ ಕರ್ಮಗಳಲ್ಲಿ ಮತ್ತು ಅವುಗಳ ಫಲಗಳಲ್ಲಿ ಶ್ರದ್ಧಾ, ಪ್ರೇಮ, ಆಸಕ್ತಿಯನ್ನಿಡುವ ಹಾಗೂ ಶಾಸ್ತ್ರವಿಹಿತ ಕರ್ಮಗಳನ್ನು ವಿಧಿಪೂರ್ವಕವಾಗಿ ತಮ್ಮ ತಮ್ಮ ಅಧಿಕಾರಕ್ಕನುಸಾರವಾಗಿ ಅನುಷ್ಠಾನ ಮಾಡುವವರನ್ನು ಕುರಿತು ಇಲ್ಲಿ "ಅವಿದ್ವಾಂಸ" ರೆಂದು ಹೇಳಿದೆ. ಇವರು ಕರ್ಮ ವಿಷಯಕ ಆಸಕ್ತಿಯುಳ್ಳವರಾದುದರಿಂದ ಜ್ಞಾನಿಗಳೂ ಅಲ್ಲ ಶಾಸ್ತ್ರವಿಹಿತ ಕರ್ಮಗಳನ್ನು ಶ್ರದ್ಧೆಯಿಂದ ಆಚರಿಸುವವರಾದುದರಿಂದ ಅಸುರೀ ಪ್ರಕೃತಿಗೆ ಸಂಬಂಧಪಟ್ಟ ಪಾಪಾಚಾರಿಗಳೂ ಅಲ್ಲ. ಅತಏವ

ಇವರನ್ನು ಕರ್ಮಾಧಿಕಾರಿಗಳೆಂದು ಹೇಳಬಹುದು. ಇವರು ಜ್ಞಾನಾಧಿಕಾರಿಗಳು ಅಲ್ಲವೆಂಬುದು ಸ್ಪಷ್ಟ. ಇವರನ್ನೇ ಅ ೨ ಶ್ಲೋ. ೪೨ ರಿಂದ ೪೪ ರ ವರೆಗೆ "ಅವಿಪಶ್ಚಿತಃ" ಎಂದೂ, ಅ ೭ ಶ್ಲೋ ೨೦ ರಿಂದ ೨೩ ರವರೆಗೆ "ಅಲ್ಪಮೇಧಸಾಮ್" ಎಂತಲೂ, ಅ ೯ ಶ್ಲೋ. ೨೦, ೨೧, ೨೩ ಮತ್ತು ೨೪ ರಲ್ಲಿ "ಅನ್ಯದೇವತಾ ಭಕ್ತಾಃ" ಎಂದೂ ಕರೆದಿದೆ.

ಪ್ರಶ್ನೆ : ಶ್ಲೋಕದಲ್ಲಿ "ಯಥಾ" ಮತ್ತು "ತಥಾ" ಎಂಬ ಈ ಎರಡು ಪದಗಳ ಪ್ರಯೋಗಕ್ಕೆ ಭಾವವೇನು ?

ಉತ್ತರ . ಸ್ವಾಭಾವಿಕ ಸ್ನೇಹ, ಆಸಕ್ತಿ ಮತ್ತು ಭವಿಷ್ಯದಲ್ಲಿ ಅವನಿಂದ ಸುಖವಾಗುವುದೆಂಬ ಆಶೆಯ ಕಾರಣದಿಂದ ತಾಯಿಯು ತನ್ನ ಮಗನನ್ನು ಹೃತ್ಪೂರ್ವಕ ಪ್ರೇಮದಿಂದ ಲಾಲನ-ಪಾಲನ ಮಾಡಿದಂತೆ ಅಹಂಕಾರ, ಮಮಕಾರ, ಆಸಕ್ತಿ ಮತ್ತು ಕಾಮನೆಯು ಸರ್ವಥಾ ನಾಶವಾಗಿದ್ದರೂ ಜ್ಞಾನಿಗಳು ಕೇವಲ ಲೋಕಸಂಗ್ರಹದ ದೃಷ್ಟಿಯಿಂದ ಕರ್ಮದಲ್ಲಿ ಆಸಕ್ತಿಯಿರುವ ಮನುಷ್ಯರಂತೆ ಶಾಸ್ತ್ರವಿಹಿತ ಕರ್ಮಗಳನ್ನು ವಿಧಿಪೂರ್ವಕ ಅಂಗ-ಉಪಾಂಗ ಸಹಿತವಾಗಿ ಅನುಷ್ಠಾನ ಮಾಡಬೇಕೆಂಬ ಭಾವವು "ಯಥಾ" "ತಥಾ" ಪದ ಪ್ರಯೋಗದಿಂದ ಕಂಡುಬರುತ್ತದೆ.

ಪ್ರಶ್ನೆ : ಈ ಶ್ಲೋಕದಲ್ಲಿ ಬಂದಿರುವ "ವಿದ್ವಾನ್" ಎಂಬ ಪದಕ್ಕೆ ತತ್ವಜ್ಞಾನಿಯೆಂದು ಹೇಳದೆ ಶಾಸ್ತ್ರಜ್ಞಾನಿಯೆಂದು ಹೇಳಿದರೆ ಆಗುವ ದೋಷವೇನು ?

ಉತ್ತರ: "ವಿದ್ವಾನ್" ಎಂಬ ಪದದೊಂದಿಗೆ "ಅಸಕ್ತಃ" ಎಂಬ ವಿಶೇಷಣದ ಪ್ರಯೋಗವಿರುವುದರಿಂದ ಅವನನ್ನು ಕೇವಲ ಶಾಸ್ತ್ರಜ್ಞಾನಿಯೆಂದು ಹೇಳಲಾಗುವುದಿಲ್ಲ. ಯಾಕೆಂದರೆ ಶಾಸ್ತ್ರಜ್ಞಾನಿಯಾದ ಮಾತ್ರಕ್ಕೆ ಯಾರನ್ನೂ ಆಸಕ್ತಿರಹಿತರೆಂದು ಹೇಳಲಾಗುವುದಿಲ್ಲ

ಪ್ರಶ್ನೆ : "ಲೋಕಸಂಗ್ರಹ ಚಿಕೀರ್ಷುಃ" ಎಂದು ಹೇಳುವುದರಿಂದ ಜ್ಞಾನಿಯಲ್ಲಿಯೂ ಇಚ್ಛೆ ಇರುತ್ತದೆ ಎಂದರ್ಥವಾಗುತ್ತದೆ ಇದು ಸರಿಯೇ ?

ಉತ್ತರ : ಜ್ಞಾನಿಗೂ ಇಚ್ಛೆ ಇರಬಹುದು. ಆದರೆ ಆ ಇಚ್ಛೆಯು ಅತ್ಯಂತ ವಿಲಕ್ಷಣವಾದುದು. ಎಲ್ಲಾ ಇಚ್ಛೆಗಳನ್ನು ದಾಟಿದ ಪುರುಷನಲ್ಲಿ

ಇರುವ ಇಚ್ಛೆಯ ಸ್ವರೂಪವನ್ನು ತಿಳಿಯಲಾಗುವುದಿಲ್ಲ. ಆದರೆ ಅವನ ಇಚ್ಛೆಯು ಸಾಧಾರಣ ಮನುಷ್ಯರನ್ನು ಕರ್ಮತತ್ಪರರನ್ನಾಗಿ ಮಾಡಲು ತೋರಿಕೆಯ ಮಾತ್ರದಿಂದ ಇರುತ್ತದೆಂದು ಹೇಳಬಹುದು. ಇಂಥಾ ಇಚ್ಛೆಯು ಭಗವಂತನಲ್ಲಿಯೂ ಇರುತ್ತದೆ. ವಾಸ್ತವವಾಗಿ ಅದು ಇಚ್ಛೆಯೇ ಅಲ್ಲ. ಆದುದರಿಂದ "ಲೋಕಸಂಗ್ರಹ ಚಿಕೀರ್ಷುಃ" ಎಂಬುದರಿಂದ, ಇತರೆಯವರು ಕರ್ತವ್ಯ ಕರ್ಮವನ್ನು ಬಿಟ್ಟು ನಷ್ಟ ಭ್ರಷ್ಟರಾಗಬಾರದೆಂಬ ದೃಷ್ಟಿಯಿಂದ ಜ್ಞಾನಿಯು ಕೇವಲ ಲೋಕಸಂಗ್ರಹಾರ್ಥ ಚೇಷ್ಟೆ ಮಾಡುತ್ತಿರುತ್ತಾನೆ. ಸಿದ್ಧಾಂತತಃ ಅವನಲ್ಲಿ ಯಾವ ಇಚ್ಛೆಯೂ ಇರುವುದಿಲ್ಲ

ಸಂಬಂಧ. ಈ ಎಲ್ಲವುಗಳನ್ನು ತಿಳಿಸಿ ಜ್ಞಾನಿಗೆ ಹೇಳಬೇಕಾದ ಕೊನೆಯ ಮಾತು ಮುಂದಿನ ಶ್ಲೋಕದಲ್ಲಿ ಹೇಳಲ್ಪಡುತ್ತದೆ

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಃ ಸಮಾಚರನ್ ॥೨೬॥**

ತಾತ್ಪರ್ಯ: ಪರಮಾತ್ಮ ಸ್ವರೂಪದಲ್ಲಿ ಸ್ಥಿತನಾದ ಜ್ಞಾನಿಯು ಶಾಸ್ತ್ರ ವಿಹಿತ ಕರ್ಮಗಳಲ್ಲಿ ಆಸಕ್ತಿಯಿರುವ ಅಜ್ಞಾನಿಗಳ ಬುದ್ಧಿಯಲ್ಲಿ ಭ್ರಮೆಯನ್ನುಂಟುಮಾಡಬಾರದು ಕಿಂತು ಸ್ವಯಂ ಶಾಸ್ತ್ರವಿಹಿತ ಸಮಸ್ತ ಕರ್ಮಗಳನ್ನೂ ಮಾಡುತ್ತಾ ಅವರಿಂದಲೂ ಮಾಡಿಸಬೇಕು

## ವಿವರಣೆ

ಪ್ರಶ್ನೆ "ಯುಕ್ತಃ" ವಿಶೇಷಣದೊಡನೆ ಇರುವ "ವಿದ್ವಾನ್" ಎಂಬ ಪದವು ಯಾರ ವಾಚಕ ?

ಉತ್ತರ: ಹಿಂದಿನ ಶ್ಲೋಕದಲ್ಲಿ ಹೇಳಿದ ಆತ್ಮಸ್ವರೂಪದಲ್ಲಿ ಸ್ಥಿತನಾದ ಆಸಕ್ತಿರಹಿತನಾದ ತತ್ವಜ್ಞಾನಿಯನ್ನು ಇಲ್ಲಿ "ಯುಕ್ತಃ" ವಿಶೇಷಣದೊಡನೆ ಕೂಡಿದ ''ವಿದ್ವಾನ್" ಎಂದು ಕರೆದಿದೆ.

ಪ್ರಶ್ನೆ: ಶಾಸ್ತ್ರವಿಹಿತ ಕರ್ಮಗಳನ್ನು ಮಾಡುವ ಕರ್ಮಾಸಕ್ತರಾದ ಅಜ್ಞಾನಿಗಳ ಬುದ್ಧಿಯಲ್ಲಿ ಭ್ರಮೆಯನ್ನುಂಟುಮಾಡಬಾರದೆಂದು ಹೇಳುವ

ಅಭಿಪ್ರಾಯವೇನು ? ಅಂದರೆ ಯಾರಿಗೂ ತತ್ವಜ್ಞಾನದ ಉಪದೇಶವನ್ನು ಮಾಡಲೇಬಾರದೆಂದು ಅರ್ಥವೆ ?

ಉತ್ತರ . ಮನುಷ್ಯ ಬುದ್ಧಿಯಲ್ಲಿ ಸಂಶಯ ಅಥವಾ ಎರಡು ಕೋಟಿಯ ಜ್ಞಾನವನ್ನು ಉತ್ಪನ್ನ ಮಾಡುವುದಕ್ಕೆ ಭ್ರಮೆಯನ್ನು ಉತ್ಪನ್ನ ಮಾಡುವುದೆಂದರ್ಥ. ಅತಏವ ಕರ್ಮಾಸಕ್ತ ಮನುಷ್ಯರಲ್ಲಿ ಕರ್ಮಗಳಲ್ಲಿಯೂ, ಕರ್ಮವನ್ನು ಬೋಧೆ ಮಾಡುವ ಶಾಸ್ತ್ರಗಳಲ್ಲಿಯೂ, ಮತ್ತು ಅದೃಷ್ಟ ಭೋಗಗಳಲ್ಲಿಯೂ ಆಸ್ತಿಕ ಬುದ್ಧಿಯಿರುತ್ತದೆ ಆ ಬುದ್ಧಿಯಲ್ಲಿ ವಿಚಲಿತವನ್ನುಂಟು ಮಾಡಿ ಅವರ ಮನಸ್ಸಿನಲ್ಲಿ ಕರ್ಮಗಳ ಮತ್ತು ಶಾಸ್ತ್ರಗಳ ವಿಷಯದಲ್ಲಿ ಅಶ್ರದ್ಧೆಯನ್ನುಂಟುಮಾಡುವುದಕ್ಕೆ ಬುದ್ಧಿಯಲ್ಲಿ ಭ್ರಮೆಯನ್ನುಂಟುಮಾಡುವುದೆಂದು ಹೇಳುತ್ತಾರೆ. ಶ್ರೀ ಕೃಷ್ಣನು ಜ್ಞಾನಿಯನ್ನು ಕುರಿತು ಕರ್ಮಾಸಕ್ತರಾದ ಅಜ್ಞಾನಿಗಳ ಬುದ್ಧಿಯಲ್ಲಿ ಭ್ರಮೆಯನ್ನುಂಟುಮಾಡಬಾರದೆಂದು ಹೇಳಿ, ಅಜ್ಞಾನಿಗಳಿಗೆ ಬೋಧೆಯನ್ನು ಮಾಡುವಾಗ ಅವರ ಅಂತಃಕರಣದಲ್ಲಿ ಅಶ್ರದ್ಧೆಯು ಉಂಟಾಗದಂತೆ ನೋಡಿಕೊಳ್ಳಬೇಕೆಂಬ ಭಾವವನ್ನು ಪ್ರಕಟ ಮಾಡಿರುತ್ತಾನೆ. ಅಶ್ರದ್ಧೆಯುಂಟಾದರೆ ಅವರು ಆಚರಿಸುವ ಕರ್ಮವನ್ನು ತ್ಯಾಗ ಮಾಡುವುದರಿಂದ ಅವರಿಗೆ ಉನ್ನತಿಯಾಗುವುದರ ಬದಲು ವರ್ತಮಾನ ಸ್ಥಿತಿಗಿಂತ ಅವನತಿಯೇ ಉಂಟಾಗುತ್ತದೆ. ಅಜ್ಞಾನಿಗಳಿಗೆ ತತ್ವಜ್ಞಾನವನ್ನು ಬೋಧೆ ಮಾಡಬಾರದೆಂದರ್ಥವಲ್ಲ ಅಂತಃಕರಣವು ಶುದ್ಧವಾಗುವುದಕ್ಕಿಂತ ಮೊದಲು ತತ್ವಜ್ಞಾನವನ್ನು ಕೇಳಿ ಕರ್ಮವನ್ನು ಬಿಟ್ಟರೆ ಇತ್ತ ಅಂತಃಕರಣ ಶುದ್ಧಿಯೂ ಇಲ್ಲ, ಅತ್ತ ತತ್ವಜ್ಞಾನವೂ ದೊರೆಯಲಿಲ್ಲ ಅಂದರೆ ಅವರಿಗೆ ತ್ರಿಶಂಕು ಸ್ವರ್ಗವಾಗುತ್ತದೆ. ಮೆಲ್ಲಮೆಲ್ಲಗೆ ಅವರಿಗೆ ಅಂತಃಕರಣ ಶುದ್ಧಿಯಾಗುವುದಕ್ಕೆ ಅವಕಾಶವನ್ನು ಕೊಟ್ಟು ನಂತರ ತತ್ವಜ್ಞಾನವನ್ನು ಬೋಧಿಸಬೇಕು.

ಸಾರಾಂಶ : ಆತ್ಮಸ್ವರೂಪವನ್ನರಿಯದೆ ನಾವು ಇದನ್ನು ಮಾಡುವವರೆಂಬ ಬಲವಾದ ಅಭಿಮಾನವುಳ್ಳವರಿಗೆ ಆತ್ಮನೂ ಕರ್ತನೂ ಭೋಕ್ತನೂ ಅಲ್ಲವೆಂಬ ತತ್ವ ವಿಚಾರವನ್ನು ಹೇಳಿ ಅವರ ತಿಳುವಳಿಕೆಯಲ್ಲಿ ಬದಲಾವಣೆಯನ್ನು ಉಂಟುಮಾಡಬಾರದು. ನಿಜವಾದ ತತ್ವವನ್ನು ಮುಚ್ಚಿಡುವುದು

ಸರಿಯಲ್ಲವೆಂದು ಅದನ್ನು ಉಪದೇಶ ಮಾಡುವ ಪ್ರಸಂಗದಲ್ಲಿ ಆ ಉಪದೇಶವನ್ನು ಕೇಳುವ ಗ್ರಹಣ ಶಕ್ತಿಯು ಅದನ್ನು ಹಿಡಿಯುವುದೋ ಇಲ್ಲವೋ ಎಂಬುದನ್ನು ನೋಡದೆ ಬಿಡಬಾರದು. ಆತ್ಮವಿಚಾರವನ್ನು ಗ್ರಹಿಸುವುದಕ್ಕೆ ಸ್ವಲ್ಪಮಟ್ಟಿಗಾದರೂ ಬುದ್ಧಿಶಕ್ತಿಯು ಬೇಕು. ಆ ಬುದ್ಧಿಯನ್ನು ಶುದ್ಧಿ ಮಾಡುವುದಕ್ಕಾಗಿ ಬಯಕೆಯನ್ನು ಬಿಟ್ಟು ಕರ್ಮ ಮಾಡುವುದು ಒಳ್ಳೆಯದೆಂದು ಮಾತ್ರ ಉಪದೇಶ ಮಾಡಬಹುದು ಆದುದರಿಂದಲೇ ಮಹಾತ್ಮರು "ಕ್ಷುದ್ರ ಜನರಿದ್ದಲ್ಲಿ ಉಪನ್ಯಾಸ ಮಾಡುವುದಕ್ಕಿಂತ ರುದ್ರಭೂಮಿಯಲ್ಲಿ ಉಪನ್ಯಾಸ ಮಾಡುವುದು ಒಳ್ಳೆಯದು'' ಎಂದು ಹೇಳುತ್ತಾರೆ ಆದರೆ ಆತ್ಮನು ಅಕರ್ತನೆಂಬ ತಿಳುವಳಿಕೆಯು ತನಗಿರುವುದೆಂದು ತಾನು ಕರ್ಮ ಬಿಡುವುದರ ಮೂಲಕ ಆ ತಿಳುವಳಿಕೆಯನ್ನು ಹಿಡಿದುಕೊಳ್ಳಲಾರದವನು ತನ್ನನ್ನು ನೋಡಿ ಕರ್ಮವನ್ನು ಬಿಡುವುದಕ್ಕೆ ದಾರಿಯನ್ನು ಕೊಡಬಾರದು ಅವನ ಮೇಲುಪಂಕ್ತಿಯ ಉಪಯೋಗವೇನೆಂದರೆ ಆತ್ಮ ಸ್ವರೂಪವನ್ನರಿತವನು ಬಯಕೆ ಇಲ್ಲದಿರುವ ಬುದ್ಧಿಯಿಂದ ಕೂಡಿದವನಾಗಿ ಮಾಡುತ್ತಾ ಶಾಸ್ತ್ರೋಕ್ತವಾದ ಎಲ್ಲಾ ಕರ್ಮಗಳನ್ನೂ ಮಾಡಿಸಬೇಕು ಹೀಗೆ ಕರ್ಮವನ್ನು ಮಾಡಿ ಚಿತ್ತಶುದ್ಧಿಯಾದ ಮೇಲೆ ತತ್ವವಿಚಾರದ ಮಾತು.

ಸಂಬಂಧ : ಕರ್ಮವನ್ನು ಮಾಡುವುದರಲ್ಲಿ ಜ್ಞಾನಿಯೂ ಅಜ್ಞಾನಿಯೂ ಒಂದೇ ಆಗಿ ಕಂಡರೂ ಅದರಲ್ಲಿ ಅಜ್ಞಾನಿಯ ತಿಳುವಳಿಕೆ ಏನು ಎಂಬುದು ಮುಂದಿನ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುತ್ತದೆ.

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿಮನ್ಯತೇ ॥೨೭॥**

ತಾ : ಎಲ್ಲಾ ರೀತಿಯಿಂದ ದೇಹೇಂದ್ರಿಯ ಮೊದಲಾದವುಗಳನ್ನು ಆತ್ಮವೆಂದು ತಪ್ಪು ತಿಳಿದಿರುವ ಮನಸ್ಸಿನವನು ಪರಮಾತ್ಮನ ಮಾಯಾ ಶಕ್ತಿಯ ಸತ್ವ, ರಜ, ತಮ ಎಂಬ ಮೂರು ಗುಣಗಳಿಂದಾಗಿರುವ ದೇಹೇಂದ್ರಿಯಾದಿಗಳಿಂದ ಲೌಕಿಕ ವೈದಿಕ ಕರ್ಮಗಳನ್ನು ನಾನು ಮಾಡುವವನು ಎಂದು ತಿಳಿದಿರುತ್ತಾನೆ.

## ವಿವರಣೆ

ಪ್ರಶ್ನೆ : ಎಲ್ಲಾ ಕರ್ಮಗಳೂ ಎಲ್ಲಾ ಪ್ರಕಾರದಿಂದಲೂ ಪ್ರಕೃತಿಯ ಗುಣಗಳಿಂದ ಮಾಡಲ್ಪಡುತ್ತವೆ ಅಂದರೇನು ?

ಉತ್ತರ : ಪ್ರಕೃತಿಯಿಂದ ಉತ್ಪನ್ನವಾದ ಸತ್ವ, ರಜ, ತಮಗಳೆಂಬ ಈ ಮೂರು ಗುಣಗಳೇ ಬುದ್ಧಿ, ಅಹಂಕಾರ, ಮನಸ್ಸು, ಆಕಾಶಾದಿ ಐದು ಸೂಕ್ಷ್ಮ ಮಹಾಭೂತ ಶ್ರೋತ್ರಾದಿ ದಶೇಂದ್ರಿಯ ಮತ್ತು ಶಬ್ದಾದಿ ಪಂಚ ವಿಷಯವೆಂದು ಇಪ್ಪತ್ತಮೂರು ತತ್ವಗಳ ರೂಪದಿಂದ ಪರಿಣಿತವಾಗುತ್ತದೆ ಇವೆಲ್ಲವೂ ಪ್ರಕೃತಿಯ ಗುಣಗಳು , ಇವುಗಳಲ್ಲಿ ಅಂತಃಕರಣ ಮತ್ತು ಇಂದ್ರಿಯಗಳು ವಿಷಯವನ್ನು ಗ್ರಹಣ ಮಾಡುತ್ತವೆ. ಅಂದರೆ ಬುದ್ಧಿಯು ನಿಶ್ಚಯ ಮಾಡುತ್ತದೆ ಮನಸ್ಸು ಯಾವುದೇ ವಿಷಯವನ್ನು ಮನನ ಮಾಡುತ್ತದೆ. ಕಿವಿಯು ಶಬ್ದವನ್ನು ಕೇಳುತ್ತದೆ. ಚರ್ಮವು ಸ್ಪರ್ಶ ಮಾಡುತ್ತದೆ. ಕಣ್ಣು ರೂಪವನ್ನು ನೋಡುತ್ತದೆ ಜಿಹ್ವೆಯು ರಸವನ್ನು ಆಸ್ವಾದಿಸುತ್ತದೆ ಮೂಗು ಗಂಧವನ್ನು ಗ್ರಹಿಸುತ್ತದೆ. ವಾಣಿಯು ಶಬ್ದವನ್ನು ಉಚ್ಚರಿಸುತ್ತದೆ. ಹಸ್ತವು ವಸ್ತುವನ್ನು ಗ್ರಹಿಸುತ್ತದೆ. ಪಾದವು ಗಮನ ಕ್ರಿಯೆಯನ್ನು ಮಾಡುತ್ತದೆ. ಗುದ, ಗುಹ್ಯಗಳು ಮಲ–ಮೂತ್ರಗಳನ್ನು ವಿಸರ್ಜನೆ ಮಾಡುತ್ತವೆ. ಇವು ಅವುಗಳ ಕರ್ಮ. ಅಂದರೆ ಸಂಸಾರದಲ್ಲಿ ಯಾವ ಪ್ರಕಾರದಿಂದಲಾದರೂ ಯಾವುದಾದರೊಂದು ಕ್ರಿಯೆಯು ನಡೆಯುತ್ತಿದ್ದರೆ ಅದೆಲ್ಲವೂ ಉಪಯುಕ್ತವಾದ ಗುಣಗಳಿಂದಲೇ ನಡೆಯುತ್ತದೆ ಎಂದು ತಿಳಿಯಬೇಕು. ನಿರ್ಗುಣ–ನಿರಾಕಾರನಾದ ಆತ್ಮನಿಗೆ ಕರ್ಮದೊಡನೆ ಯಾವ ಸಂಬಂಧವೂ ಇಲ್ಲ ಎಂಬ ಭಾವವನ್ನು ಶ್ರೀ ಕೃಷ್ಣನು ಪ್ರಕಟ ಮಾಡಿರುತ್ತಾನೆ.

ಪ್ರಶ್ನೆ : "ಅಹಂಕಾರ ವಿಮೂಢಾತ್ಮ" ಅಂದರೇನು ?

ಉತ್ತರ : ಪ್ರಕೃತಿಯ ಕಾರ್ಯವಾದ, ಮೇಲೆ ಹೇಳಿದ ಬುದ್ಧಿ, ಅಹಂಕಾರ, ಮನಸ್ಸು, ಮಹಾಭೂತ, ಇಂದ್ರಿಯ ಮತ್ತು ವಿಷಯ – ಈ ಇಪ್ಪತ್ತಮೂರು ತತ್ವಗಳ ಸಮುದಾಯರೂಪ ಶರೀರದಲ್ಲಿ ಅಹಂಕಾರ ಅಂದರೆ ಅದರಲ್ಲಿರುವ ದೃಢ ಆತ್ಮಭಾವವು ಅಹಂಕಾರವೆನಿಸುತ್ತದೆ. ಈ ಅನಾದಿಸಿದ್ಧ

ವಾದ ಅಹಂಕಾರದ ಅಭ್ಯಾಸದಿಂದ ಯಾರ ಅಂತಃಕರಣವು ಅತ್ಯಂತ ಮೋಹಿತವಾಗಿರುವುದೋ, ಯಾರ ವಿವೇಕ ಶಕ್ತಿಯು ಲುಪ್ತವಾಗಿರುವುದರಿಂದ ಆತ್ಮ-ಅನಾತ್ಮ ವಸ್ತುಗಳ ಯಥಾರ್ಥ ವಿವೇಚನೆಯು ಯಾರಿಗಿಲ್ಲವೋ ಮತ್ತು ತನ್ನನ್ನು ಶರೀರಕ್ಕೆ ವಿಲಕ್ಷಣವಾದ ಪರಮಾತ್ಮನೇ ಎಂದು ತಿಳುವಳಿಕೆಯಿಲ್ಲವೋ ಇಂಥಾ ಅಜ್ಞಾನಿಯನ್ನು ಕುರಿತು ಇಲ್ಲಿ "ಅಹಂಕಾರ ವಿಮೂಢಾತ್ಮಾ" ಎಂದು ಕರೆದಿದೆ.

ಪ್ರಶ್ನೆ : ಉಪರ್ಯುಕ್ತ ಅಜ್ಞಾನಿಯು "ನಾನು ಮಾಡುತ್ತೇನೆ" ಎಂದು ತಿಳಿಯುತ್ತಾನೆ – ಅಂದರೇನು ?

ಉತ್ತರ : ವಾಸ್ತವದಿಂದ ಆತ್ಮನಿಗೂ ಕರ್ಮಕ್ಕೂ ಯಾವ ಸಂಬಂಧವಿಲ್ಲದಿದ್ದರೂ ಅಜ್ಞಾನಿಯು ಮೇಲೆ ಹೇಳಿದ ಇಪ್ಪತ್ತಮೂರು ತತ್ವಗಳ ಸಮುದಾಯ ರೂಪ ದೇಹವನ್ನು ಆತ್ಮನೆಂದು ತಿಳಿದು ಅದರಿಂದಾಗುವ ಕರ್ಮಗಳನ್ನು ನಾನೇ ಮಾಡಿದೆನೆಂದು ತಪ್ಪು ತಿಳಿದುಕೊಳ್ಳುತ್ತಾನೆ. ಅಂದರೆ ನಾನು ನಿಶ್ಚಯ ಮಾಡುತ್ತೇನೆ, ಸಂಕಲ್ಪ ಮಾಡುತ್ತೇನೆ, ಕೇಳುತ್ತೇನೆ, ಹೇಳುತ್ತೇನೆ, ನೋಡುತ್ತೇನೆ, ತಿನ್ನುತ್ತೇನೆ, ಕುಡಿಯುತ್ತೇನೆ, ಮಲಗುತ್ತೇನೆ, ನಡೆಯುತ್ತೇನೆ – ಇತ್ಯಾದಿ ಅನಾತ್ಮದ ಕರ್ಮಗಳನ್ನು ಆತ್ಮನಾದ ತನ್ನಲ್ಲಿ ಆರೋಪಿಸಿಕೊಳ್ಳುತ್ತಾನೆ. ಇದರಿಂದ ಅವನಿಗೆ ಕರ್ಮಬಂಧನವುಂಟಾಗುತ್ತದೆ ಈ ಕರ್ಮದಿಂದ ಆಗುವ ಫಲವನ್ನು ಭೋಗಿಸುವುದಕ್ಕಾಗಿ ಅವನು ಪುನಃ ಪುನಃ ಹುಟ್ಟಬೇಕಾಗುತ್ತದೆ ಎಂಬ ಭಾವವನ್ನು ಶ್ರೀ ಕೃಷ್ಣನು ಪ್ರಕಟ ಮಾಡಿರುತ್ತಾನೆ.

ಈ ವಿಷಯವನ್ನು ಸ್ಪಷ್ಟಪಡಿಸುವ ಒಂದು ಉದಾಹರಣೆ

ಒಂದು ಕಾಡಿನಲ್ಲಿ ಒಂದು ಹುಲಿಯಿತ್ತು ಅದು ಒಂದು ದಿವಸ ಹಸಿದು ಆಹಾರಕ್ಕಾಗಿ ತಿರುಗಾಡುತ್ತಿರಲು ಒಂದು ಮರದ ಮೇಲಿನ ಒಂದು ಟೊಂಗೆಯ ಮೇಲೆ ಒಂದು ಕೋತಿ ಕೂತಿತ್ತು. ಮತ್ತೊಂದು ಟೊಂಗೆಯ ಮೇಲೆ ಒಬ್ಬ ಮನುಷ್ಯನು ಕೂತಿದ್ದನು. ಇದನ್ನು ವಾಸನೆಯಿಂದ ತಿಳಿದು, ಹುಲಿ ಒಂದಕ್ಕೆ ಬದಲಾಗಿ ಎರಡು ಆಹಾರವಿರುವುದೆಂದು ಸಂತೋಷಪಟ್ಟಿತು ಆದರೆ ಅವು ಕೈಗೆ ಸಿಗುವಂತಿಲ್ಲ, ತನಗೆ ಮರ ಹತ್ತಲು ಬರುವುದಿಲ್ಲ. ಈಶ್ವರನು ತನಗೆ

ಮರ ಹತ್ತುವ ಯುಕ್ತಿಯನ್ನು ಕಲಿಸಲಿಲ್ಲವೆಂದು ಮನದಲ್ಲಿ ಮರುಗಿತು. ಏನಾದರೂ ಉಪಾಯ ಮಾಡಿ ಮೇಲಿನ ಪ್ರಾಣಿಗಳು ಕೆಳಗೆ ಬೀಳುವಂತೆ ಮಾಡಬೇಕೆಂದು ಯೋಚಿಸಿ, ಮಂಗನು ಕುಳಿತುಕೊಂಡಿರುವ ಟೊಂಗೆಯ ಕೆಳಕ್ಕೆ ಬಂದು ಕೋತಿಯ ನೆರಳಿನ ಮೇಲೆ ಒಂದು ಸಾರೆ ತನ್ನ ಪಂಜದಿಂದ ಜೋರಾಗಿ ಅಪ್ಪಳಿಸಿತು. ಬುದ್ಧಿಯಿಲ್ಲದ ಕೋತಿಯು ನೆರಳಿಗೆ ಹೊಡೆದ ಹೊಡೆತ ತನಗೆ ಹೊಡೆಯಲ್ಪಟ್ಟಿತೆಂದು ತಿಳಿದು ಭಯಪಟ್ಟು ಕೆಳಕ್ಕೆ ಬಿದ್ದಾಕ್ಷಣ ಹುಲಿಯು ಅದನ್ನು ತಿಂದುಬಿಟ್ಟಿತು. ಹುಲಿಗೆ ರುಚಿ ಹತ್ತಿ ಮನುಷ್ಯನನ್ನೂ ಅದೇ ಯುಕ್ತಿಯಿಂದ ತಿನ್ನಬೇಕೆಂದು ಭಾವಿಸಿ, ಮನುಷ್ಯನು ಕೂತಿರುವ ಟೊಂಗೆಯ ಕೆಳಗೆ ಬಂದು ಹಿಂದಿನಂತೆ ನೆಳಲಿಗೆ ಹೊಡೆಯಲಾಗಿ, ಮನುಷ್ಯನು - "ನನ್ನನ್ನು ಕೋತಿಯೆಂದು ತಿಳಿದಿರುವೆಯಾ ? ನಾನು ಮನುಷ್ಯ ನೀನು ಹೊಡೆಯುವುದು ನನ್ನ ನೆಳಲಿಗೆ, ನನಗಲ್ಲ. ನೀನು ಹೊಡೆದ ನೆಳಲಿಗಿಂತ ನಾನು ಬೇರೆ" ಎಂದು ತನ್ನ ಸ್ಥಾನದಲ್ಲಿ ತಾನು ಕುಳಿತೇ ಇದ್ದನು. ಹುಲಿಗೆ ನಿರಾಸೆಯಾಯಿತು

ಇದರಿಂದ ತಿಳಿದುಕೊಳ್ಳಬೇಕಾದ ಅಂಶ ಏನೆಂದರೆ

ಕೋತಿಯೆಂದರೆ ಅಹಂಕಾರದಿಂದ ಮೂಢಾತ್ಮನಾದ ಅಜ್ಞಾನಿ ಮನುಷ್ಯನು ತನ್ನ ದೇಹದ ದೇಹೇಂದ್ರಿಯಾದಿ ಸಂಘಾತದ ಧರ್ಮವನ್ನು – ಕ್ರಿಯೆಯನ್ನು ತನ್ನ ಮೇಲೆ ಆರೋಪಿಸಿಕೊಂಡು ನಾನು ಕರ್ತ ಭೋಕ್ತನೆಂದು ತಿಳಿದು ಮಾಡಿದ ಕರ್ಮದ ಫಲವನ್ನು ಭೋಗಿಸುವುದಕ್ಕಾಗಿ ಪುನಃ ಪುನಃ ಜನ್ಮ ತಾಳುತ್ತಾನೆ ಮರದ ಮೇಲೆ ಕೂತ ಮನುಷ್ಯನೆಂದರೆ – ನಾನು ಬೇರೆ, ದೇಹೇಂದ್ರಿಯಾದಿ ಸಂಘಾತ ರೂಪವಾದ ದೇಹವೇ ಬೇರೆ ; ಇದಕ್ಕೂ ನನಗೂ ಯಾವ ಸಂಬಂಧವೂ ಇಲ್ಲ ಅದು ಅನೃತ, ಜಡ, ದುಃಖರೂಪವಾಗಿದೆ ನಾನು ಸಚ್ಚಿದಾನಂದ ಸ್ವರೂಪನು ಎಂದು ತನ್ನನ್ನು ವಿವೇಕ ಬುದ್ಧಿಯಿಂದ ದೇಹಕ್ಕಿಂತ ಬೇರೆಯಾಗಿ ತಿಳಿದ ಜ್ಞಾನಿ. ಇವನು ಸತತ ಕರ್ಮ ಮಾಡುತ್ತಿದ್ದರೂ ಅಸಂಗನೇ ಇವನಿಗೆ ಪುನರ್ಜನ್ಮವಿಲ್ಲ, ಇವನು ಜೀವನ್ಮುಕ್ತನು ಎಂದು ಭಾವಿಸಬೇಕು

ಸಂಬಂಧ ಜ್ಞಾನಿಯ ತಿಳುವಳಿಕೆಯ ಸ್ವರೂಪವನ್ನು ಮುಂದಿನ ಶ್ಲೋಕದಲ್ಲಿ ಪ್ರತಿಪಾದಿಸಿದೆ

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮ ವಿಭಾಗಯೋಃ |**
**ಗುಣಾಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ || ೨೮ ||**

ತಾ : ಅರ್ಜುನನೇ ಕೇಳು. ಸತ್ವ, ರಜ, ತಮಗಳಿಂದಾಗಿರುವಂಥಾ ಮನಸ್ಸು, ಪ್ರಾಣ, ಇಂದ್ರಿಯಗಳು, ದೇಹ, ಹೊರಗಿನ ವಿಷಯಗಳು, ಇವುಗಳ ವಿಭಾಗಗಳು ಮತ್ತು ನೋಡುವುದು ಮೊದಲಾದ ಜ್ಞಾನೇಂದ್ರಿಯಗಳ ಕೆಲಸ ಗಳು, ಮಾತು ಮೊದಲಾದ ಕರ್ಮೇಂದ್ರಿಯಗಳ ಕೆಲಸಗಳು, ಉಸಿರಾಡುವ ಪ್ರಾಣದ ಕೆಲಸ, ಸಂಕಲ್ಪಿಸುವ ಮನಸ್ಸಿನ ಕೆಲಸ – ಈ ಎಲ್ಲಾ ವಿಭಾಗದ ನಿಜ ಸ್ಥಿತಿಯನ್ನು ಅರಿತವನಾದರೋ ಗುಣಗಳ ಕಾರ್ಯಗಳಾದ ದೇಹೇಂದ್ರಿಯಾದಿ ಗಳು ಗುಣಗಳ ಕಾರ್ಯಗಳಾದ ವಿಷಯಗಳಲ್ಲಿ ವ್ಯವಹರಿಸುತ್ತವೆ, ಆತ್ಮನಾದ ತನಗೂ ಕರ್ಮಗಳಿಗೂ ಯಾವ ಸಂಬಂಧವೂ ಇಲ್ಲ – ಎಂದು ತಿಳಿದು ನಾನು ಕರ್ತನೆಂದು ಅಭಿಮಾನಗೊಳ್ಳುವುದಿಲ್ಲ

ಪ್ರಶ್ನೆ ಈ ಶ್ಲೋಕದಲ್ಲಿರುವ "ತು" ಪದ ಪ್ರಯೋಗಕ್ಕೆ ಕಾರಣವೇನು?

ಉತ್ತರ . ಇಪ್ಪತ್ತೇಳನೆಯ ಶ್ಲೋಕದಲ್ಲಿ ವರ್ಣಿಸಿರುವ ಅಜ್ಞಾನಿಗಿಂತ ಜ್ಞಾನಿಯು ವಿಲಕ್ಷಣನೆಂದು ಬೇರ್ಪಡಿಸಿ ತೋರಿಸುವುದೇ "ತು" ಪದ ಪ್ರಯೋಗದ ಅಭಿಪ್ರಾಯ.

ಪ್ರಶ್ನೆ . "ಗುಣವಿಭಾಗ" ಮತ್ತು "ಕರ್ಮವಿಭಾಗ" ಅಂದರೇನು ? ಆ ಎರಡನ್ನು ತತ್ವತಃ ತಿಳಿದುಕೊಳ್ಳುವುದು ಅಂದರೇನು ?

ಉತ್ತರ. ಸತ್ವ, ರಜ, ತಮ ಈ ಮೂರು ಗುಣಗಳ ಕಾರ್ಯರೂಪ ವಾದ ಇಪ್ಪತ್ತಮೂರು ತತ್ವಗಳು – ಇವುಗಳ ಸಮುದಾಯವೇ ಗುಣವಿಭಾಗ ಅಲ್ಲದೆ ಕರ್ಮದಲ್ಲಿ ಸಾತ್ವಿಕ, ರಾಜಸ, ತಾಮಸವೆಂದು ಭೇದ ಮಾಡಲ್ಪಡುವ ಅಂತಃಕರಣದ ಸಾತ್ವಿಕ, ರಾಜಸಿಕ, ತಾಮಸಗಳೆಂಬ ಭಾವಗಳಿರುತ್ತವೆ. ಇವುಗಳ ಸಂಬಂಧದಿಂದ ಮನುಷ್ಯನು ಸಾತ್ವಿಕ, ರಾಜಸಿಕ, ತಾಮಸಿಕನೆಂದು ಹೇಳಿಸಿಕೊಳ್ಳುತ್ತಾನೆ. ಈ ಗುಣವೃತ್ತಿಗಳೂ ಸಹ ಗುಣವಿಭಾಗದಲ್ಲಿಯೇ ಸೇರುತ್ತವೆ.

ಪೂರ್ವ ಶ್ಲೋಕದಲ್ಲಿ ವರ್ಣಿಸಿದಂತೆ ಉಪರ್ಯುಕ್ತ ಗುಣವಿಭಾಗದಿಂದ ಯಾವ ಯಾವ ಕ್ರಿಯೆಗಳು ನಡೆಯುತ್ತಿರುವುವೋ ಈ ಕ್ರಿಯೆಗಳಲ್ಲಿ ಮನು

ಷ್ಯನು ಕರ್ತೃತ್ವಾಭಿಮಾನವನ್ನು ಮಾಡುವುದರಿಂದ ಮನುಷ್ಯನು ಬಂಧನಕ್ಕೆ ಬೀಳುತ್ತಾನೆ. ಈ ಕರ್ಮಗಳ ಸಮುದಾಯವೇ ಕರ್ಮವಿಭಾಗ. ಈ ಗುಣ ವಿಭಾಗ ಮತ್ತು ಕರ್ಮವಿಭಾಗಗಳು ಪ್ರಕೃತಿಯ ವಿಸ್ತಾರವೇ ಎಂದು ತಿಳಿಯ ಬೇಕು ಅತಏವ ಈ ಎಲ್ಲವು ಜಡ, ಕ್ಷಣಿಕ, ನಾಶವಾಗುವಂತಹವುಗಳು ಮತ್ತು ವಿಕಾರಶೀಲಗಳಾಗಿರುತ್ತವೆ. ಅವು ಗುಣಮಯಗಳೆಂಬುದನ್ನು ಮರೆಯಬಾರದು. ಇವು ಸ್ವಪ್ನ ಪದಾರ್ಥಗಳಂತೆ ಇರುವಿಕೆಯಿಲ್ಲದೆ ತೋರು ತ್ತವೆ. ಈ ಗುಣವಿಭಾಗ, ಕರ್ಮವಿಭಾಗ ಪದಾರ್ಥಗಳಿಗಿಂತ ಆ ಆತ್ಮನು ಸರ್ವಥಾ ವಿಲಕ್ಷಣನು ಆತ್ಮನು ನಿರ್ಗುಣ, ನಿರಾಕಾರ, ನಿರ್ವಿಕಾರ, ನಿತ್ಯ ಶುದ್ಧ, ಮುಕ್ತ ಮತ್ತು ಜ್ಞಾನಸ್ವರೂಪನಾಗಿರುವುದರಿಂದ ಅವನು ಬ್ರಹ್ಮಕ್ಕೆ ಭಿನ್ನನಲ್ಲ. ಈ ವಿಷಯವನ್ನು ವಾಸ್ತವವಾಗಿ ತಿಳಿಯುವುದಕ್ಕೆ ಗುಣವಿಭಾಗ ಮತ್ತು ಕರ್ಮವಿಭಾಗದ ತತ್ವವನ್ನು ತಿಳಿಯುವುದು ಅನ್ನುತ್ತಾರೆ

ಪ್ರಶ್ನೆ "ಗುಣವಿಭಾಗ" ಮತ್ತು "ಕರ್ಮವಿಭಾಗ"ದ ತತ್ವವನ್ನು ತಿಳಿದ ಜ್ಞಾನಿಯು ಸಂಪೂರ್ಣವಾಗಿ ಗುಣಗಳೇ ಗುಣಗಳಲ್ಲಿ ವರ್ತಿಸುತ್ತವೆ ಎಂದು ತಿಳಿದು ತಾನು ಆಸಕ್ತನಾಗುವುದಿಲ್ಲ – ಅಂದರೇನು ?

ಉತ್ತರ: ಉಪರ್ಯುಕ್ತ ಗುಣವಿಭಾಗ ಮತ್ತು ಕರ್ಮವಿಭಾಗವನ್ನು ತಿಳಿದ ಸಾಂಖ್ಯಯೋಗಿಯು ಮನ, ಬುದ್ಧಿ. ಇಂದ್ರಿಯಗಳಿಂದ ಮತ್ತು ಶರೀರ ದಿಂದ ಆಗುವ ಪ್ರತಿಕ್ರಿಯೆಗಳಲ್ಲಿ ಗುಣಗಳ ಕಾರ್ಯರೂಪವಾದ ಮನ, ಬುದ್ಧಿ, ಇಂದ್ರಿಯ ಮೊದಲಾದ ಕರಣಗಳೇ. ಗುಣಗಳ ಕಾರ್ಯರೂಪ ತಮ್ಮ ತಮ್ಮ ವಿಷಯಗಳಲ್ಲಿ ವರ್ತಿಸುತ್ತವೆ. ನನಗೂ ಇವುಗಳಿಗೂ ಯಾವ ಸಂಬಂಧವೂ ಇಲ್ಲ. ಈ ತಿಳುವಳಿಕೆಯ ಬಲದಿಂದ ಯಾವ ಕರ್ಮದಲ್ಲಿಯೂ, ಯಾವ ಕರ್ಮದ ಫಲದಲ್ಲಿಯೂ, ಫಲಭೋಗದಲ್ಲಿಯೂ ಆಸಕ್ತನಾಗುವುದಿಲ್ಲ, ಅಂದರೆ ಯಾವ ಕರ್ಮದಲ್ಲಿಯೂ, ಯಾವ ಕರ್ಮ ಫಲಭೋಗದಲ್ಲಿಯೂ ಅವನು ತನ್ನ ಸಂಬಂಧವನ್ನು ಸ್ಥಾಪಿಸುವುದಿಲ್ಲ. ಅವನು ಅವುಗಳನ್ನು ಅನಿತ್ಯ, ಜಡ, ವಿಕಾರಿ ಮತ್ತು ನಾಶವಾಗುವವುಗಳು ಎಂತಲೂ, ತನ್ನನ್ನು ಸದಾ–ಸರ್ವದಾ ನಿತ್ಯ, ಶುದ್ಧ, ಬುದ್ಧ, ನಿರ್ವಿಕಾರ, ಅಕರ್ತಾ, ಅಸಂಗನಾದ ಬ್ರಹ್ಮಸ್ವರೂಪ ವೆಂತಲೂ ತಿಳಿದಿರುತ್ತಾನೆ. ಐದನೆಯ ಅಧ್ಯಾಯದ ಎಂಟು ಮತ್ತು

ಒಂಬತ್ತನೇ ಶ್ಲೋಕದಲ್ಲಿಯೂ, ಹದಿನಾಲ್ಕನೇ ಅಧ್ಯಾಯದ ಹತ್ತೊಂಬತ್ತನೇ ಶ್ಲೋಕದಲ್ಲಿಯೂ ಇದೇ ವಿಷಯವು ಪ್ರತಿಪಾದಿಸಲ್ಪಡುತ್ತದೆ.

ಸಂಬಂಧ ಈ ಪ್ರಕಾರ ಅಜ್ಞಾನಿ ಕರ್ಮಾಸಕ್ತ ಮನುಷ್ಯನಿಗೂ ಮತ್ತು ಜ್ಞಾನಿಯಾದ ಸಾಂಖ್ಯಯೋಗಿಗೂ ಇರುವ ಭೇದವನ್ನು ತೋರಿಸಿ, ಮುಂದಿನ ಶ್ಲೋಕದಲ್ಲಿ ಆತ್ಮ ತತ್ವವನ್ನು ಪೂರ್ಣವಾಗಿ ತಿಳಿದುಕೊಂಡವರು, ಮಹಾ ಪುರುಷರು ಕರ್ಮಾಸಕ್ತ ಅಜ್ಞಾನಿ ಮನುಷ್ಯರನ್ನು ವಿಚಲಿತ ಮಾಡ ಬಾರದೆಂಬ ವಿಷಯವು ಪ್ರತಿಪಾದಿಸಲ್ಪಡುತ್ತದೆ.

**ಪ್ರಕೃತೇರ್ಗುಣಸಮ್ಮೂಢಾಃ ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥೨೯॥**

ತಾತ್ಪರ್ಯ ಪ್ರಕೃತಿಯ ಗುಣಗಳಿಂದ ಭ್ರಮೆ ಹೊಂದಿದವರು ಗುಣ ಕರ್ಮಗಳಲ್ಲಿ ಆಸಕ್ತರಾಗುತ್ತಾರೆ; ಎಲ್ಲಾ ತಿಳಿದವನು ಅಲ್ಪಜ್ಞರಾದ ಆ ಮಂದಮತಿಗಳನ್ನು ಅಲ್ಲಾಡಿಸಬಾರದು

**ವಿವರಣೆ**

ಪರಮಾತ್ಮನ ಮಾಯಾಶಕ್ತಿಯ ಸತ್ವ, ರಜ, ತಮ – ಎಂಬ ಗುಣಗಳ ಕಾರ್ಯವಾದ ದೇಹ–ಇಂದ್ರಿಯ ಮೊದಲಾದವುಗಳನ್ನೇ ಆತ್ಮನೆಂದು ತಪ್ಪು ತಿಳಿದುಕೊಂಡವರು ಆ ದೇಹೇಂದ್ರಿಯಗಳು ಮಾಡಿದ ಕರ್ಮದಲ್ಲಿ ನಾವು ಫಲದ ಬಯಕೆಯಿಂದ ಮಾಡಿದೆವೆಂದು ಅಭಿಮಾನಗೊಳ್ಳುತ್ತಾರೆ. ಫಲದ ಬಯಕೆ ಯನ್ನು ಮಾತ್ರ ತಿಳಿದವರೆನಿಸಿರುವ ದಡ್ಡರಾದ ಆ ಕರ್ಮಾಸಕ್ತರನ್ನು ಫಲದ ಹಣೆಯ ಬರಹವನ್ನೂ, ಗುಣಕರ್ಮದ ವಿಭಾಗವನ್ನೂ ಎಲ್ಲವನ್ನೂ ಅರಿತಿರುವ ಆತ್ಮಜ್ಞಾನಿಯು ಕರ್ಮವನ್ನು ಮಾಡಬೇಕೆಂಬ ಬುದ್ಧಿಯಿಂದ ಕದಲಿಸ ಬಾರದು. ಅವರ ಚಿತ್ತಶುದ್ಧಿಯಾಗುವವರೆಗೂ ಕರ್ಮವನ್ನು ಮಾಡುತ್ತಿರು ವಂತೆ ಅವರ ಬುದ್ಧಿಯನ್ನು ಹಾಗೆಯೇ ಇರಗೊಡಬೇಕು.

ಪ್ರಶ್ನೆ : "ಅಕೃತ್ಸ್ನವಿದಃ" ಅಂದರೆ ಯಾರು ?

ಉತ್ತರ · ಯಾವುದನ್ನು ತಿಳಿದರೆ ಅದರ ಹೊರತು ಮತ್ತೇನನ್ನೂ ತಿಳಿ ದಂತಾಗುವುದಿಲ್ಲವೋ ಅಂಥ ಕ್ಷುದ್ರ ವಿಷಯವನ್ನು ತಿಳಿದವರು.

ಪ್ರಶ್ನೆ "ಕೃತ್ಸ್ನವಿದಃ"ರೆಂದರೆ ಯಾರು ?

ಉತ್ತರ: ಯಾವುದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವುದೋ ಅಂಥ ಪರಮಾತ್ಮ ಸ್ವರೂಪವನ್ನು ತಿಳಿದವರು.

ಅರ್ಜುನನ ಪ್ರಾರ್ಥನೆಯಂತೆ ಶ್ರೀ ಕೃಷ್ಣನು ನಿಶ್ಚಿತವಾದ ಮೋಕ್ಷ ದಾಯಕವಾದ ಸಾಧನವನ್ನು ಬೋಧಿಸುವುದಕ್ಕಾಗಿ ಇಲ್ಲಿಯವರಗೆ ದೇಹಾಭಿ ಮಾನಿಯಾದ ಅಜ್ಞಾನಿಯು ಯಾವ ಪರಿಸ್ಥಿತಿಯಲ್ಲಿಯೂ ಕರ್ಮವನ್ನು ಬಿಡದೇ ಮಾಡುತ್ತಿರಬೇಕೆಂದು ಅಂದಾಜು ಇಪ್ಪತ್ತು ಕಾರಣಗಳನ್ನು ತೋರಿ ಸಿರುತ್ತಾನೆ ಅವುಗಳ ವಿವರಣೆ

೧ ಕರ್ಮವನ್ನು ಆರಂಭಿಸದೆ ನೈಷ್ಕರ್ಮವು ಲಭಿಸಲಾರದು ೩ ೪

೨ ಕರ್ಮವನ್ನು ತ್ಯಾಗ ಮಾಡಿದ ಮಾತ್ರದಿಂದ ಜ್ಞಾನನಿಷ್ಠೆಯು ಸಿದ್ಧಿಸಲಾರದು ೩ ೪

೩ ದೇಹಾಭಿಮಾನಿಯು ಒಂದು ಕ್ಷಣವೂ ಕರ್ಮದ ವಿನಹ ಇರ ಲಾರನು ೩. ೫

೪ ಹೊರಗಿನಿಂದ ಕರ್ಮಗಳನ್ನು ಬಿಟ್ಟಂತೆ ನಟಿಸಿ ಮನಸ್ಸಿನಲ್ಲಿ ವಿಷಯ ಚಿಂತನೆ ಮಾಡುವವನು ಮಿಥ್ಯಾಚಾರಿ ೩. ೬

೫ ಮನ, ಇಂದ್ರಿಯಗಳನ್ನು ವಶಮಾಡಿಕೊಂಡು ನಿಷ್ಕಾಮ ಭಾವ ದಿಂದ ಕರ್ಮ ಮಾಡುವವನು ಶ್ರೇಷ್ಠನು ೩. ೭

೬ ಕರ್ಮ ಮಾಡದೆ ಇರುವುದಕ್ಕಿಂತ ಕರ್ಮ ಮಾಡುವುದೇ ಶ್ರೇಷ್ಠ. ೩. ೮

೭ ಕರ್ಮ ಮಾಡದೆ ಶರೀರ ವ್ಯವಹಾರವು ನಡೆಯದು ೩ ೮

೮ ಯಜ್ಞಕ್ಕಾಗಿ ಮಾಡಲ್ಪಡುವ ಕರ್ಮಗಳು ಬಂಧನಕಾರಿಗಳಲ್ಲ, ಮುಕ್ತಿಗೆ ಕಾರಣಗಳು ೩ ೯

೯ ಕರ್ಮ ಮಾಡಲು ಪ್ರಜಾಪತಿಯ ಆಜ್ಞೆ, ಮತ್ತು ಅಕರ್ತೃತ್ವ ಬುದ್ಧಿಯಿಂದ ಮಾಡಿದರೆ ಅಲ್ಪ ಶ್ರೇಯಸ್ಸಿಗೆ ಕಾರಣಗಳು. ೩. ೧೦–೧೧

೧೦ ಕರ್ತವ್ಯವನ್ನು ಪಾಲಿಸದೆ ಭೋಗವನ್ನು ಭೋಗಿಸುವವನು ಕಳ್ಳನು. ೩. ೧೨

೧೧ ಕರ್ತವ್ಯವನ್ನು ಪರಿಪಾಲಿಸಿ ಯಜ್ಞಶೇಷದಿಂದ ಶರೀರ ನಿರ್ವಾಹಕ್ಕಾಗಿ ತಿನ್ನುವವನು ಪಾಪಗಳಿಂದ ಮುಕ್ತನಾಗುತ್ತಾನೆ. ಶ. ೧೩

೧೨ ಯಜ್ಞಾದಿಗಳನ್ನು ಮಾಡದೆ ಶರೀರದ ಪೋಷಣೆಗಾಗಿ ಅನ್ನವನ್ನು ಬೇಯಿಸುವವನು ಪಾಪಿ ಶ. ೧೩

೧೩ ಕರ್ತವ್ಯ ಕರ್ಮದ ತ್ಯಾಗ ದ್ವಾರಾ ಸೃಷ್ಟಿಚಕ್ರದಲ್ಲಿ ಅಟಂಕವನ್ನುಂಟುಮಾಡುವ ಮನುಷ್ಯನ ಜೀವನವು ವ್ಯರ್ಥ ಮತ್ತು ಪಾಪಮಯ ಶ ೧೬

೧೪ ಅನಾಸಕ್ತ ಭಾವದಿಂದ ಕರ್ಮ ಮಾಡಿದರೆ ಮುಕ್ತಿ ಆಗುತ್ತದೆ ಶ ೧೯

೧೫ ಪೂರ್ವಕಾಲದಲ್ಲಿ ಜನಕಾದಿಗಳಿಂದಲೂ ಕರ್ಮ ದ್ವಾರಾ ಸಿದ್ಧಿಯು ಪ್ರಾಪ್ತಮಾಡಲ್ಪಟ್ಟಿದೆ ಶ ೨೦

೧೬ ಇತರೆಯವರು ಶ್ರೇಷ್ಠ ಮಹಾಪುರುಷರನ್ನು ಅನುಸರಿಸುತ್ತಾರೆ. ಆದುದರಿಂದ ಶ್ರೇಷ್ಠ ಮಹಾಪುರುಷರು ಕರ್ಮ ಮಾಡಬೇಕು ಶ. ೨೧

೧೭ ಭಗವಂತನಿಗೆ ಯಾವ ಕರ್ತವ್ಯವೂ ಇಲ್ಲವಾದರೂ ಅವನೂ ಸಹ ಲೋಕಸಂಗ್ರಹಕ್ಕಾಗಿ ಕರ್ಮ ಮಾಡುತ್ತಾನೆ. ಶ ೨೨

೧೮ ಜ್ಞಾನಿಗೆ ಯಾವ ಕರ್ತವ್ಯವೂ ಇಲ್ಲದಿದ್ದರೂ ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡಲೇಬೇಕು. ಶ. ೨೫

೧೯ ಜ್ಞಾನಿಯು ಸ್ವಯಂ ವಿಹಿತ ಕರ್ಮವನ್ನು ತ್ಯಜಿಸಿ ಅಥವಾ ಕರ್ಮ ತ್ಯಾಗದ ಉಪದೇಶವನ್ನು ಮಾಡಿ, ಯಾವ ಪ್ರಕಾರದಿಂದಲೂ ಜನರನ್ನು ಕರ್ತವ್ಯ ಕರ್ಮದಿಂದ ವಿಚಲಿತ ಮಾಡಕೂಡದು ಅವನು ಸ್ವಯಂ ಕರ್ಮ ಮಾಡುತ್ತಿದ್ದು ಮತ್ತೊಬ್ಬರಿಂದ ಮಾಡಿಸಬೇಕು. ಶ. ೨೬

೨೦ ಜ್ಞಾನಿಯು ವಿಹಿತಕರ್ಮಗಳನ್ನು ಸ್ವರೂಪತಃ ತ್ಯಜಿಸುವ ಉಪದೇಶ ಮಾಡಿ ಕರ್ಮಾಸಕ್ತ ಮನುಷ್ಯರನ್ನು ವಿಚಲಿತ ಮಾಡಕೂಡದು. ಶ. ೨೯

ಈ ಪ್ರಕಾರ ಕರ್ಮ ಮಾಡಲು ಇಪ್ಪತ್ತು ಕಾರಣಗಳನ್ನು ಹೇಳಿ ಮುಂದಿನ ಶ್ಲೋಕದಲ್ಲಿ ಮೋಕ್ಷವನ್ನು ಬಯಸುವವನು ಯಾವ ಯುಕ್ತಿಯಿಂದ ಕರ್ಮ ಮಾಡಬೇಕೆಂಬುದನ್ನು ಬೋಧಿಸುತ್ತಾನೆ.

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮ ಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥**

ತಾ : ಅಧ್ಯಾತ್ಮ ಚಿತ್ತದ ದ್ವಾರಾ ಸರ್ವ ಕರ್ಮಗಳನ್ನು ನನ್ನಲ್ಲಿ ಅರ್ಪಿಸಿ ಆಶೆ, ಮಮತೆ, ತಾಪಗಳಿಲ್ಲದವನಾಗಿ ಯುದ್ಧವನ್ನು ಮಾಡು

## ವಿವರಣೆ

ಈ ಶ್ಲೋಕವು ಶ್ರೀ ಸ್ವಾಮಿ ವಿವೇಕಾನಂದರಿಗೆ ಬಹಳ ಪ್ರಿಯವಾದುದು. ಗೀತಾ ತತ್ತ್ವವನ್ನು ಬೋಧಿಸುವಾಗ ಅನೇಕ ಸಾರಿ ಅದನ್ನು ಬೋಧಿಸುತ್ತಿದ್ದರು

ಪ್ರಶ್ನೆ "ಅಧ್ಯಾತ್ಮ ಚೇತಸಾ" ಪದದಲ್ಲಿರುವ "ಚೇತಸ್" ಶಬ್ದವು ಯಾವ ನಮೂನೆಯ ಚಿತ್ತದ ವಾಚಕವಾಗಿದೆ? ಮತ್ತು ಅದರ ದ್ವಾರಾ ಸರ್ವ ಕರ್ಮಗಳನ್ನು ಭಗವಂತನಿಗೆ ಅರ್ಪಿಸುವುದೆಂದರೇನು ?

ಉತ್ತರ . ಮಲ, ವಿಕ್ಷೇಪ, ಆವರಣ ಎಂಬ ಮೂರು ದೋಷಗಳಲ್ಲಿ ಮಲ. ವಿಕ್ಷೇಪಗಳನ್ನು ಕಳೆದುಕೊಂಡು ಚಿತ್ತು – ಪರಮಾತ್ಮನನ್ನು ತಿಳಿದು ಅವನ ದಿವ್ಯಶಕ್ತಿಯಲ್ಲಿ ವಿಶ್ವಾಸವಿಟ್ಟ ಚಿತ್ತ, ಮತ್ತು ನಿರಂತರ ಪರಮಾತ್ಮನ ಸ್ವರೂಪವನ್ನು ಚಿಂತಿಸುವ ಚಿತ್ತು — ಈ ನಮೂನೆಯ ಚಿತ್ತವನ್ನು ಇಲ್ಲಿ "ಚೇತಸ್" ಎಂದು ಕರೆದಿದೆ ಈ ಚಿತ್ತದಿಂದ ಯಾರು ಪರಮಾತ್ಮನನ್ನು ಸರ್ವಶಕ್ತಿವಂತನೂ, ಸರ್ವಾಧಾರನೂ, ಸರ್ವವ್ಯಾಪಿಯೂ, ಸರ್ವಜ್ಞನೂ, ಸರ್ವೇಶ್ವರನೂ ಹಾಗೂ ಪರಮಪ್ರಾಪ್ಯನೂ, ಪರಮಗತಿ, ಪರಮ ಹಿತೈಷಿ, ಪರಮ ಪ್ರಿಯನೂ, ಪರಮ ಸುಹೃದಯನೂ ಮತ್ತು ಪರಮ ದಯಾಳುವೂ ಎಂದು ತಿಳಿದು, ತನ್ನ ಅಂತಃಕರಣ, ಇಂದ್ರಿಯ ಸಹಿತವಾದ ಶರೀರವನ್ನು, ಅವುಗಳಿಂದ ಮಾಡಲ್ಪಡುವ ಕರ್ಮಗಳನ್ನು, ಅವುಗಳಿಂದ ಬರುವ ಫಲಗಳನ್ನು ಮತ್ತು ಸಮಸ್ತ ಜಗತ್ತಿನ ಪದಾರ್ಥಗಳನ್ನೆಲ್ಲಾ ಅವನವೇ ಎಂದು ಭಾವಿಸಿ ಅವುಗಳಲ್ಲಿರುವ ಮಮತೆಯನ್ನು ತ್ಯಜಿಸುವುದಲ್ಲದೆ ನನ್ನಲ್ಲಿ ಯಾವ ಶಕ್ತಿಯೂ ಇಲ್ಲ, ಪರಮಾತ್ಮನೇ ಎಲ್ಲಾ ಮಾಡುವ ಶಕ್ತಿಯನ್ನು ದಯಪಾಲಿಸಿ ನನ್ನಿಂದ ತನ್ನ ಇಚ್ಛೆಯಂತೆ ಯಥಾಯೋಗ್ಯವಾದ ಸಮಸ್ತ ಕರ್ಮಗಳನ್ನು ಮಾಡಿಸು

ತ್ತಾನೆ, ನಾನು ಕೇವಲ ನಿಮಿತ್ತ ಮಾತ್ರನು – ಈ ಪ್ರಕಾರ ತನ್ನನ್ನು ಸರ್ವಥಾ ಭಗವಂತನ ಅಧೀನನೆಂದು ಭಾವಿಸಿ ಭಗವಂತನ ಆಜ್ಞಾನುಸಾರ, ಅವನಿಗಾಗಿಯೇ, ಅವನ ಪ್ರೇರಣೆಯಿಂದಲೇ ಅವನು ಮಾಡಿಸಿದಂತೆ ಸಮಸ್ತ ಕರ್ಮಗಳನ್ನು ಗೊಂಬೆಯಂತೆ ಮಾಡುತ್ತಿರುವುದು ಆ ಕರ್ಮಗಳಲ್ಲಿಯೂ, ಅವುಗಳಿಂದ ಬರುವ ಫಲಗಳಲ್ಲಿಯೂ ಯಾವ ಮಾನಸಿಕ ಸಂಬಂಧವನ್ನೂ ಇಟ್ಟುಕೊಳ್ಳದೆ ಎಲ್ಲವೂ ಭಗವಂತನದೇ ಎಂದು ತಿಳಿದು ಆಚರಿಸುವುದಕ್ಕೆ ಅಧ್ಯಾತ್ಮ ಚೇತಸ್ಸಿನಿಂದ ಸಮಸ್ತ ಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸುವುದೆನ್ನುತ್ತಾರೆ ಇದೇ ಪ್ರಕಾರ ಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸುವ ವಿಷಯವನ್ನು ೧೨ನೇ ಅಧ್ಯಾಯದ ೬ನೇ ಶ್ಲೋಕದಲ್ಲಿಯೂ ಮತ್ತು ೧೮ನೇ ಅಧ್ಯಾಯದ ೫೭ ಮತ್ತು ೬೬ನೇ ಶ್ಲೋಕಗಳಲ್ಲಿಯೂ ವಿವರಿಸಿದೆ

ಪ್ರಶ್ನೆ ಉಪರ್ಯುಕ್ತ ಪ್ರಕಾರದಿಂದ ಸಮಸ್ತ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸಿದ ಮೇಲೆ ಆಶಾ, ಮಮತಾ ಮತ್ತು ಸಂತಾಪವು ತನ್ನಷ್ಟಕ್ಕೆ ತಾನೇ ನಾಶವಾಗುತ್ತವೆ ಹೀಗಿದ್ದರೆ ಮತ್ತೊಂದು ಸಾರೆ ಆಶಾ, ಮಮತಾ ಮತ್ತು ಸಂತಾಪಗಳಿಂದ ರಹಿತನಾಗಿ ಯುದ್ಧ ಮಾಡೆಂದು ಹೇಳುವ ಕಾರಣವೇನು ?

ಉತ್ತರ ಪರಮಾತ್ಮನಲ್ಲಿ ಅಧ್ಯಾತ್ಮ ಚೇತಸ್ಸಿನಿಂದ ಸರ್ವ ಕರ್ಮಗಳನ್ನು ಸಮರ್ಪಿಸಿದ ಮೇಲೆ ಆಶಾ, ಮಮತಾ, ಸಂತಾಪ' ಇವು ಇರುವುದಿಲ್ಲ – ಎಂಬ ಭಾವವನ್ನು ಸ್ಪಷ್ಟ ಮಾಡುವುದಕ್ಕಾಗಿ ಶ್ರೀ ಕೃಷ್ಣನು ಅರ್ಜುನನನ್ನು ಕುರಿತು ಆಶಾ, ಮಮತಾ ಮತ್ತು ಸಂತಾಪವನ್ನು ಬಿಟ್ಟು ಯುದ್ಧ ಮಾಡಲು ಹೇಳುತ್ತಾನೆ ನೀನು ಸಮಸ್ತ ಕರ್ಮಗಳ ಭಾರವನ್ನು ನನ್ನ ಮೇಲೆ ಹಾಕಿ ಎಲ್ಲಾ ಪ್ರಕಾರದಿಂದ ಆಶಾ, ಮಮತಾ, ರಾಗ–ದ್ವೇಷ ಮತ್ತು ಹರ್ಷ–ಶೋಕ ಮೊದಲಾದ ವಿಕಾರಗಳಿಂದ ರಹಿತನಾಗಿ ನನ್ನ ಆಜ್ಞೆಯಂತೆ ಯುದ್ಧವನ್ನು ಮಾಡು ಎಂಬುದು ಅಭಿಪ್ರಾಯ. ಈ ಕಾರಣದಿಂದ ಕರ್ಮವನ್ನು ಮಾಡುವಾಗ ಅಥವಾ ಫಲವನ್ನು ಬಯಸುವಾಗ ಸಾಧಕನಿಗೆ ಆ ಕರ್ಮಗಳಲ್ಲಿಯೂ ಭೋಗಗಳಲ್ಲಿಯೂ ಮಮತಾ, ಆಸಕ್ತಿ ಅಥವಾ ಕಾಮನೆಯಿಲ್ಲದಿರಬೇಕು. ಅಂದರೆ ಅಂತಃಕರಣದಲ್ಲಿ ರಾಗ–ದ್ವೇಷ, ಹರ್ಷ–ಶೋಕ

ಮೊದಲಾದ ವಿಕಾರವಿರುವವರೆಗೆ ಸಮಸ್ತ ಕರ್ಮ ಭಗವಂತನಿಗೆ ಅರ್ಪಿತವಾಗಿಲ್ಲವೆಂದು ತಿಳಿಯಬೇಕು.

ಸಾರಾಂಶ: ಎಲ್ಲಾ ಕರ್ಮಗಳನ್ನು ಸರ್ವಜ್ಞನಾದ ಮತ್ತು ಪರಮೇಶ್ವರನಾದ ನನ್ನಲ್ಲಿ ಸರ್ವಾಂತರ್ಯಾಮಿ ಎಂಬ ಬುದ್ಧಿಯಿಂದ ಒಪ್ಪಿಸಿಬಿಟ್ಟು ಅಂದರೆ ಪರಮಾತ್ಮನ ಆಳಾಗಿ ದುಡಿಯುತ್ತೇನೆಂದು ಭಾವಿಸಿ ಕರ್ಮವನ್ನು ಮಾಡುತ್ತಾ, ಯಾವ ಬಯಕೆಯೂ ಇಲ್ಲದವನಾಗಿ ದೇಹಾದಿಗಳಲ್ಲಿಯೂ ಹೆಂಡಿರು ಮಕ್ಕಳು ಮೊದಲಾದವುಗಳಲ್ಲಿಯೂ ನನ್ನವರೆಂಬ ಅಭಿಮಾನವಿಲ್ಲದವನಾಗಿ, ಬದುಕಿರುವಾಗ ಅಪಕೀರ್ತಿಯಾಗಲಿ, ಸತ್ತಮೇಲೆ ನರಕವಾಗಲಿ ಗಂಟು ಬೀಳುವುದೆಂಬ ಸಂತಾಪವನ್ನು ಹಚ್ಚಿಕೊಳ್ಳದೆ ನೀನು ಉದ್ದೇಶ ಮಾಡಿರುವ ಯುದ್ಧವನ್ನು ಮಾಡು.

ಸಂಬಂಧ. ಮುಂದಿನ ಶ್ಲೋಕದಲ್ಲಿ ಕರ್ಮಯೋಗವನ್ನು ಆಚರಿಸಿದ್ದರ ಫಲವು ಪ್ರತಿಪಾದಿಸಲ್ಪಡುತ್ತದೆ.

**ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥೩೧॥**

ತಾತ್ಪರ್ಯ: ಯಾರು ದೋಷ ದೃಷ್ಟಿಯಿಲ್ಲದವರಾಗಿ ಮತ್ತು ಶ್ರದ್ಧಾಯುಕ್ತರಾಗಿ ನನ್ನ ಈ ಮತವನ್ನು ಅನುಸರಣೆ ಮಾಡುವರೋ ಅವರು ಸಂಪೂರ್ಣ ಕರ್ಮಗಳಿಂದ ಬಿಡಲ್ಪಡುತ್ತಾರೆ

**ವಿವರಣೆ**

ಪ್ರಶ್ನೆ: ಇಲ್ಲಿ "ಯೆ" ಪದದೊಂದಿಗೆ "ಮಾನವಾಃ" ಪದ ಪ್ರಯೋಗದ ಭಾವವೇನು?

ಉತ್ತರ: ಈ ಶ್ಲೋಕದಲ್ಲಿ ಹೇಳಿರುವ ಸಾಧನವು ಯಾವುದಾದರೊಂದು ಜಾತಿ ವಿಶೇಷಕ್ಕಾಗಲಿ, ವ್ಯಕ್ತಿ ವಿಶೇಷಕ್ಕಾಗಲಿ ನಿಯಮಿತವಾಗಿರದೇ ಮನುಷ್ಯ ಮಾತ್ರರಿಗೆಲ್ಲ ಅಧಿಕಾರವಿದೆ ಎಂಬ ಭಾವವು ಈ ಪದಪ್ರಯೋಗದಿಂದ ಸೂಚಿತವಾಗುತ್ತದೆ. ಪ್ರತಿ ಒಂದು ವರ್ಣ, ಆಶ್ರಮ, ಜಾತಿ ಅಥವಾ

ಸಮಾಜದ ಮನುಷ್ಯನು ತನ್ನ ಕರ್ತವ್ಯ ಕರ್ಮವನ್ನು ಮೇಲೆ ಹೇಳಿದಂತೆ ನನಗೆ ಅಂದರೆ ಪರಮಾತ್ಮನಿಗೆ ಸಮರ್ಪಿಸಿ ಈ ಸಾಧನವನ್ನು ಅನುಷ್ಠಾನ ಮಾಡಬಹುದು

ಪ್ರಶ್ನೆ "ಶ್ರದ್ಧಾವಂತ" ಮತ್ತು "ಅನುಸೂಯಂತಃ" ಈ ಎರಡು ಪದಗಳ ಪ್ರಯೋಗಕ್ಕೆ ಕಾರಣವೇನು ?

ಉತ್ತರ . ಯಾವನಿಗೆ ಶ್ರೀ ಕೃಷ್ಣನಲ್ಲಿ ದೋಷ ದೃಷ್ಟಿ ಇರುವುದೋ, ಯಾರು ನನ್ನನ್ನು ಅಂದರೆ ಗುರುಗಳನ್ನು ಸಾಕ್ಷಾತ್ ಪರಮೇಶ್ವರನೆಂದು ತಿಳಿಯದೆ ಸಾಧಾರಣ ಮನುಷ್ಯನೆಂದು ತಿಳಿದಿರುವನೋ, ಯಾರಿಗೆ ನನ್ನಲ್ಲಿ ಅಂದರೆ ಗುರುಗಳಲ್ಲಿಯೂ, ಗುರುಗಳ ಮಾತಿನಲ್ಲಿಯೂ ವಿಶ್ವಾಸವಿಲ್ಲವೋ ಅವರು ಈ ಸಾಧನಕ್ಕೆ ಅಧಿಕಾರಿಗಳಲ್ಲ. ಯಾವನು ಈ ಸಾಧನದ ಅನುಷ್ಠಾನ ವನ್ನು ಗುರುಗಳಲ್ಲಿ ಯಾವ ಪ್ರಕಾರದ ದೋಷ ದೃಷ್ಟಿಯಿಲ್ಲದೆ ಸದಾ ಶ್ರದ್ಧಾ ಭಕ್ತಿಯಿಂದ ಆಚರಿಸುವನೋ ಅವನೇ ಮಾಡಿ ಸಿದ್ಧಿ ಪಡೆಯಬಲ್ಲನು ಈ ಸಾಧನದಿಂದ ಸಿದ್ಧಿ ಪಡೆಯಬೇಕೆನ್ನುವವರು ಮೇಲೆ ಹೇಳಿದ ಗುಣಗಳಿಂದ ಕೂಡಿದವರಾಗಿರಬೇಕು ಹಾಗಲ್ಲದೆ ಈ ಸಾಧನೆಯನ್ನು ಅನುಷ್ಠಾನ ಮಾಡುವುದು ಒಂದು ಕಡೆ ಇರಲಿ, ಇದನ್ನು ತಿಳಿಯಲೂ ಸಹ ಅವನು ಅಧಿಕಾರಿಯಲ್ಲ.

ಸಾರಾಂಶ : ಆತ್ಮಜ್ಞಾನಿಗಳಾದವರು ತಮಗೆ ಕರ್ಮದ ಸಂಬಂಧವಿಲ್ಲ ವೆಂದು ಮುಕ್ತರಾಗುತ್ತಾರೆ. ಅನಾದಿಯಿಂದಲೂ ನಡೆದುಕೊಂಡು ಬಂದಿರು ವಂಥ ನನ್ನ ಈ ಮತವನ್ನು ನಿಜವಾಗಿ ಫಲಕಾರಿಯೆಂದು ನನ್ನ ಮೇಲೆ ವಿಶ್ವಾಸ ವುಳ್ಳವರಾಗಿ, ಯುದ್ಧವನ್ನು ಮಾಡೆಂಬ ಮಾತು ನಿರ್ದಯವನ್ನು ಸೂಚಿಸುವು ದೆಂದು ಮುಂತಾಗಿ ನನ್ನಲ್ಲಿ ದೋಷವನ್ನು ಹುಡುಕದವರಾಗಿ ಆಚರಿಸಿದವರು ಅವರೂ ಕೂಡಾ ಚಿತ್ತಶುದ್ಧಿಯನ್ನೂ ಜ್ಞಾನವನ್ನೂ ಪಡೆದು ಪುಣ್ಯ–ಪಾಪ ಕರ್ಮಗಳಿಂದ ಬಿಡುಗಡೆಯನ್ನು ಹೊಂದುತ್ತಾರೆ.

ಸಂಬಂಧ . ಈ ಪ್ರಕಾರ ನನ್ನಲ್ಲಿ ದೋಷಾರೋಪಣೆಯನ್ನು ಮಾಡು ವವರು ಮೂರ್ಖರೆಂಬ, ಸಂಪೂರ್ಣ ಜ್ಞಾನಗಳಲ್ಲಿ ಮೋಹಿತರಾಗಿ ನಷ್ಟ ವಾಗುತ್ತಾರೆಂಬ ವಿಷಯವು ಮುಂದಿನ ಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟಿದೆ

**ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ |**
**ಸರ್ವಜ್ಞಾನ ವಿಮೂಢಾಂಸ್ತಾನ್ ವಿದ್ಧಿ ನಷ್ಟಾನ ಚೇತಸಃ ||೩೨||**

ತಾ . ಆದರೆ ಯಾರು ಅಸೂಯೆಯುಳ್ಳವರಾಗಿ ನನ್ನ ಈ ಮತವನ್ನು ಅನುಷ್ಠಾನ ಮಾಡುವುದಿಲ್ಲವೋ ಅವರನ್ನು ಸರ್ವಜ್ಞಾನ ವಿಮೂಢರೆಂದೂ, ಹಾಳಾದವರೆಂದೂ, ಬುದ್ಧಿಯಿಲ್ಲದವರೆಂದೂ ತಿಳಿ

## ವಿವರಣೆ

ಪ್ರಶ್ನೆ . "ತು" ಪದದ ಪ್ರಯೋಗದ ಭಾವವೇನು ?

ಉತ್ತರ . ಪೂರ್ವ ಶ್ಲೋಕದಲ್ಲಿ ಪ್ರತಿಪಾದಿಸಿದ ಸಾಧಕರುಗಳಿಗಿಂತ ಅತ್ಯಂತ ವಿಪರೀತವಾಗಿ ನಡೆಯುವವರ ಗತಿಯು ಈ ಶ್ಲೋಕದಲ್ಲಿ ವರ್ಣಿಸಲ್ಪಡುತ್ತದೆ ಎಂದು ಬೇರ್ಪಡಿಸುವುದಕ್ಕಾಗಿ "ತು" ಪದ ಪ್ರಯೋಗವಾಗಿದೆ

ಪ್ರಶ್ನೆ . ಶ್ರೀ ಕೃಷ್ಣನಲ್ಲಿ ದೋಷಾರೋಪಣೆ ಮಾಡುತ್ತಾ ಅವನ ಮತಕ್ಕನುಸಾರವಾಗಿ ಆಚರಿಸದವರು ಅಂದರೇನು ?

ಉತ್ತರ. ಶ್ರೀ ಕೃಷ್ಣನನ್ನು ಸಾಧಾರಣ ಮನುಷ್ಯನೆಂದು ತಿಳಿದು "ಅವನು ನಮ್ಮಿಂದ ಪೂಜೆ ಮಾಡಿಸಿಕೊಳ್ಳುವ ಇಚ್ಛೆಯಿಂದ ಈ ಪ್ರಕಾರ ಉಪದೇಶ ಮಾಡುತ್ತಾನೆ ಸಮಸ್ತ ಕರ್ಮಗಳನ್ನು ಇವನಿಗೆ ಅರ್ಪಣ ಮಾಡುವುದರಿಂದಲೇ ಮನುಷ್ಯನು ಕರ್ಮಬಂಧನದಿಂದ ಮುಕ್ತನಾಗುತ್ತಾನೆ. ಇದು ಸಂಭವವೇ?" ಎಂದು ತಾನು ಭಾವಿಸುವುದಲ್ಲದೆ ಇತರೆಯುವರಿಗೂ ಹಾಗೆಯೇ ಹೇಳುತ್ತಾನೆ

ಇವೇ ಶ್ರೀಕೃಷ್ಣನ ಮೇಲೆ ಮಾಡುವ ದೋಷಾರೋಪಣೆ ಹೀಗೆ ತಿಳಿದು ಶ್ರೀ ಕೃಷ್ಣನ ಆಜ್ಞಾನುಸಾರ ಮಮತಾ, ಆಸಕ್ತಿ ಮತ್ತು ಕಾಮನೆಗಳನ್ನು ತ್ಯಜಿಸದೆ, ಕರ್ಮಗಳನ್ನು ಪರಮೇಶ್ವರನಿಗೆ ಅರ್ಪಿಸದೆ, ತನ್ನ ಇಚ್ಛೆಯಂತೆ ಕರ್ಮಗಳನ್ನು ಮಾಡುತ್ತ ವಿಹಿತ ಕರ್ಮಗಳನ್ನು ಮಾತ್ರ ಬಿಟ್ಟು, ಮಾಡಬಾರದ ಕರ್ಮಗಳನ್ನು ಮಾಡುತ್ತ ಇರುವುದೇ ಶ್ರೀಕೃಷ್ಣನಲ್ಲಿ ದೋಷಾರೋಪಣೆಯನ್ನು ಮಾಡಿ ಅವನ ಮತಕ್ಕೆ ವಿರುದ್ಧವಾಗಿ ನಡೆಯುವುದಾಗಿದೆ.

ಪ್ರಶ್ನೆ : "ಅಚೇತಸಃ" ಎಂಬ ಪದವು ಯಾವ ಶ್ರೇಣಿಯ ಮನುಷ್ಯನ ವಾಚಕವಾಗಿದೆ ಮತ್ತು ಅವರನ್ನು ಸಂಪೂರ್ಣ ಜ್ಞಾನದಿಂದ ಮೋಹಿತರೂ, ಹಾಗೆಯೇ ನಷ್ಟವಾದವರೂ ಎಂದು ತಿಳಿ ಎಂದು ಹೇಳಲು ಕಾರಣವೇನು ?

ಉತ್ತರ : ಯಾರ ಮನಸ್ಸು ದೋಷಪೂರ್ಣವಾಗಿದೆಯೋ, ಯಾರಲ್ಲಿ ವಿವೇಕದ ಅಭಾವವಿದೆಯೋ, ಯಾರ ಚಿತ್ತವು ವಶದಲ್ಲಿ ಇಲ್ಲವೋ ಅಂಥಾ ಮೂರ್ಖ ಹಾಗೂ ತಾಮಸರನ್ನು ಕುರಿತು ಇಲ್ಲಿ "ಅಚೇತಸಃ" ಎಂದ ಕರೆದಿದೆ. ಅವರು ಸಂಪೂರ್ಣ ಜ್ಞಾನಗಳಲ್ಲಿ ಮೋಹಿತರೂ ಮತ್ತು ನಷ್ಟವಾದವರೂ ಎಂದು ಹೇಳುವುದರ ಭಾವವೇನೆಂದರೆ – ಇಂಥಾ ಮನುಷ್ಯರ ಬುದ್ಧಿಯು ವಿಪರೀತವಾಗಿರುತ್ತದೆ ಅವರು ಈ ಲೋಕ ಮತ್ತು ಪರಲೋಕಗಳ ಸಂಪೂರ್ಣ ಸುಖ ಸಾಧನಗಳನ್ನು ವಿಪರೀತವಾಗಿಯೇ ತಿಳಿದುಕೊಳ್ಳುತ್ತಾರೆ. ಈ ಕಾರಣದಿಂದಲೇ ಅವರು ವಿಪರೀತ ಆಚರಣೆಯಲ್ಲಿ ಪ್ರವೃತ್ತರಾಗುತ್ತಾರೆ. ಇದರ ಫಲವಾಗಿ ಅವರು ಈ ಲೋಕ ಮತ್ತು ಪರಲೋಕಗಳಲ್ಲಿ ಪತಿತರಾಗುತ್ತಾರೆ ಸತ್ತ ನಂತರ ಅವರು ತಮ್ಮ ದುಷ್ಕರ್ಮದ ಫಲವನ್ನು ಭೋಗಿಸುವುದಕ್ಕಾಗಿ ಶ್ವಾನ – ಸೂಕರಾದಿ ನೀಚ ಯೋನಿಗಳಲ್ಲಿ ಜನ್ಮಿಸಬೇಕಾಗುತ್ತದೆ. ಇಲ್ಲವೇ ಘೋರ ನರಕದಲ್ಲಿ ಬಿದ್ದು ಭಯಂಕರವಾದ ಯಾತನೆಯನ್ನು ಭೋಗಿಸಬೇಕಾಗುತ್ತದೆ.

ಸಾರಾಂಶ : ಮತ್ತು ಯಾರು ಈ ನನ್ನ ಅಭಿಪ್ರಾಯವನ್ನು ದೋಷದೃಷ್ಟಿಯಿಂದ ನೋಡುವವರಾಗಿ ಆಚರಿಸುವುದಿಲ್ಲವೋ ಅವರನ್ನು ಕರ್ಮಮಾರ್ಗ ಮತ್ತು ಆತ್ಮಜ್ಞಾನ ಮೊದಲಾದ ಎಲ್ಲಾ ತಿಳುವಳಿಕೆಗಳನ್ನು ತಪ್ಪಾಗಿ ತಿಳಿದುಕೊಂಡವರನ್ನಾಗಿಯೂ, ಪುರುಷಾರ್ಥಗಳನ್ನು ಕಳೆದುಕೊಂಡು ಹಾಳಾಗಿ ಹೋದವರನ್ನಾಗಿಯೂ, ಅವಿವೇಕಿಗಳನ್ನಾಗಿಯೂ ತಿಳಿ.

ಸಂಬಂಧ . ಎಲ್ಲರೂ ಈ ಸನ್ಮಾರ್ಗವನ್ನೇಕೆ ತಿಳಿಯುವುದಿಲ್ಲವೆಂಬುದು ಮುಂದಿನ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುತ್ತದೆ.

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩ ॥**

ತಾ. ಜ್ಞಾನವುಳ್ಳವನೂ ಕೂಡ ತನ್ನ ಪ್ರಕೃತಿಗೆ ಅನುಗುಣವಾಗಿ ನಡೆಯುತ್ತಾನೆ ಪ್ರಾಣಿಗಳು ಪ್ರಕೃತಿಯನ್ನೇ ಅನುಸರಿಸುತ್ತವೆ ಹೀಗಿರುವಾಗ ನಿಗ್ರಹವು ಏನು ಮಾಡಬಲ್ಲುದು ?

## ವಿವರಣೆ

ಪ್ರಶ್ನೆ "ಎಲ್ಲಾ ಪ್ರಾಣಿಗಳು ಪ್ರಕೃತಿಗೆ ಪ್ರಾಪ್ತರಾಗುತ್ತಾರೆ" ಅಂದರೇನು?

ಉತ್ತರ ಸಮಸ್ತ ನದಿಗಳ ನೀರು ಸ್ವಾಭಾವಿಕವಾಗಿಯೇ ಸಮುದ್ರದ ಕಡೆ ಪ್ರವಹಿಸುತ್ತವೆ ಆ ಪ್ರವಾಹವನ್ನು ಹಠಪೂರ್ವಕ ತಡೆಯಲಾಗುವುದಿಲ್ಲ ಅದರಂತೆ ಸಮಸ್ತ ಪ್ರಾಣಿಗಳು ತಮ್ಮ ತಮ್ಮ ಪ್ರಕೃತಿಗೆ ಅಧೀನವಾಗಿ ಪ್ರಕೃತಿಯ ಪ್ರವಾಹದಲ್ಲಿ ಬಿದ್ದು ಪ್ರಕೃತಿಯ ಕಡೆಗೆ ಹೋಗುತ್ತವೆ. ಆದುದರಿಂದ ಯಾರೂ ಸರ್ವಥಾ ಕರ್ಮವನ್ನು ಬಿಡಲಾಗುವುದಿಲ್ಲ – ಎಂಬ ಭಾವವು ಎಲ್ಲಾ ಪ್ರಾಣಿಗಳು ಪ್ರಕೃತಿಗೆ ಪ್ರಾಪ್ತರಾಗುತ್ತಾರೆ ಎಂಬುದರಿಂದ ಪ್ರಕಟವಾಗುತ್ತದೆ. ಆದರ ಮನುಷ್ಯನಿಗೆ ಯಾವ ತರದ ಸ್ವಾತಂತ್ರ್ಯವೂ ಇಲ್ಲವೆಂದರ್ಥವಲ್ಲ! ಹೇಗೆಂದರೆ ಬೆಂಗಳೂರಿನಿಂದ ಮದ್ರಾಸಿಗೆ ಹೋಗುವ ಗಾಡಿಯನ್ನು ಮಧ್ಯೆ ನಿಲ್ಲಿಸುವ ಸ್ವಾತಂತ್ರ್ಯವು ಯಾರಿಗೂ ಇಲ್ಲವಾದರೂ ಕಾಟಪಾಡಿಗೆ ಟಿಕೇಟು ತೆಗೆದುಕೊಂಡವನು ತನ್ನ ಸ್ವೇಚ್ಛೆಯಂತೆ ಕಾಟಪಾಡಿಯಲ್ಲಿ ಇಳಿಯಬಹುದಲ್ಲವೆ ? ಅಂದರೆ ನದಿ ಪ್ರವಾಹವನ್ನು ಮಧ್ಯೆ ತಡೆಯಲು ಆಗದಿದ್ದರೂ ಒಂದು ಕಡೆಯಿಂದ ಮತ್ತೊಂದು ಕಡೆಗೆ ತಿರುಗಿಸಬಹುದಲ್ಲವೆ ? ಅದರಂತೆ ಮನುಷ್ಯನು ತನ್ನ ಉದ್ದೇಶವನ್ನು ಬದಲಾಯಿಸಿ ಆ ಪ್ರವಾಹದ ಮುಖವನ್ನು ಬದಲಾಯಿಸಬಹುದು , ಅಂದರೆ ರಾಗ ದ್ವೇಷಗಳನ್ನು ತ್ಯಜಿಸಿ ಆ ಕರ್ಮಗಳನ್ನು ಪರಮಾತ್ಮನ ಪ್ರಾಪ್ತಿಯಲ್ಲಿ ಸಾಧನವನ್ನಾಗಿ ಮಾಡಿಕೊಳ್ಳಬಲ್ಲನು

ಪ್ರಶ್ನೆ: ಪ್ರಕೃತಿ ಅಂದರೇನು ?

ಉತ್ತರ : ಇಲ್ಲಿ ಜನ್ಮ ಜನ್ಮಾಂತರದಲ್ಲಿ ಮಾಡಿದ ಸ್ವಭಾವ ರೂಪದಲ್ಲಿ ಪ್ರಕಟವಾದ ಕರ್ಮಗಳ ಸಂಸ್ಕಾರಕ್ಕೆ. ಅಂದರೆ ಆ ಸ್ವಭಾವಕ್ಕೆ " ಪ್ರಕೃತಿ " ಎನ್ನುತ್ತಾರೆ

ಪ್ರಶ್ನೆ : "ಜ್ಞಾನವಾನ್" ಎಂದರೆ ಯಾರು ?

ಉತ್ತರ ಇಲ್ಲಿ ಜ್ಞಾನವುಳ್ಳವನೆಂದರೆ ಪರಮಾತ್ಮನನ್ನು ತಿಳಿದು, ಪರಮಾತ್ಮನನ್ನು ಪ್ರಾಪ್ತಮಾಡಿಕೊಂಡ ಜ್ಞಾನಿಯೆಂದರ್ಥವಲ್ಲ. ಪ್ರಸಂಗಾನುಸಾರವಾಗಿ ಜ್ಞಾನವಂತನೆಂದರೆ ಆತ್ಮಾನಾತ್ಮ ವಿವೇಕಿಯೆಂದರ್ಥ.

ಪ್ರಶ್ನೆ " ಅಪಿ " ಎಂಬ ಪದಕ್ಕೆ ಅರ್ಥವೇನು ?

ಉತ್ತರ. ವಿವೇಕಿಯೂ ಸಹ ತನ್ನ ಪ್ರಕೃತಿಗೆ ಅನುಸಾರವಾಗಿ ಚೇಷ್ಟೆ ಮಾಡುವನೆಂದ ಮೇಲೆ ವಿವೇಕವಿಲ್ಲದ ಅಜ್ಞಾನೀ ಪುರುಷರು ಪ್ರಕೃತಿಗೆ ಅಧೀನರಾಗುತ್ತಾರೆಂದು ಹೇಳಬೇಕಾಗಿಲ್ಲವೆಂಬ ಭಾವವು "ಅಪಿ" ಪದಪ್ರಯೋಗದಿಂದ ಪ್ರಕಟವಾಗುತ್ತದೆ.

ಪ್ರಶ್ನೆ. ಜ್ಞಾನಿಗಳ ಸ್ವಭಾವವು ಭಿನ್ನವಾಗಿರುತ್ತದೆಯೇ ?

ಉತ್ತರ ಪೂರ್ವ ಸಾಧನ ಮತ್ತು ಪ್ರಾರಬ್ಧದ ಭೇದದಿಂದ ಜ್ಞಾನಿಗಳ ಸ್ವಭಾವದಲ್ಲಿಯೂ ಭೇದವಿರಬಹುದು

ಪ್ರಶ್ನೆ ಜ್ಞಾನಿಗೆ ಪೂರ್ವಾರ್ಜಿತ ಕರ್ಮಗಳ ಸಂಸ್ಕಾರ ರೂಪ ಸ್ವಭಾವದೊಂದಿಗೆ ಸಂಬಂಧವಿರುತ್ತದೆಯೆ ? ಇಲ್ಲದಿದ್ದರೆ ಜ್ಞಾನಿಯೂ ತನ್ನ ಪ್ರಕೃತಿಗೆ ಅನುಸಾರವಾಗಿ ಚೇಷ್ಟೆ ಮಾಡುತ್ತಾನೆ ಎಂದು ಹೇಳಲು ಕಾರಣವೇನು ?

ಉತ್ತರ. ಜ್ಞಾನಿಗೆ ವಸ್ತುತಃ ಕರ್ಮ ಸಂಸ್ಕಾರದೊಂದಿಗೆ ಯಾವ ಸಂಬಂಧವೂ ಇರುವುದಿಲ್ಲ ವಸ್ತುತಃ ಯಾವ ಕ್ರಿಯೆಯನ್ನೂ ಮಾಡುವವನಲ್ಲ ಕಿಂತು ಅವನ ಅಂತಃಕರಣದಲ್ಲಿ ಪೂರ್ವಾರ್ಜಿತ ಪ್ರಾರಬ್ಧದ ಸಂಸ್ಕಾರ ಇರುತ್ತದೆ. ಅದಕ್ಕೆ ಅನುಸಾರವಾಗಿ ಅವನ ಬುದ್ಧಿ, ಮನಸ್ಸು ಮತ್ತು ಇಂದ್ರಿಯಗಳ ದ್ವಾರಾ ಪ್ರಾರಬ್ಧ ಭೋಗ ಮತ್ತು ಲೋಕಸಂಗ್ರಹಕ್ಕಾಗಿ ಕರ್ತೃತ್ವವಿಲ್ಲದೆ ಕ್ರಿಯೆಗಳು ನಡೆಯುತ್ತವೆ. ಆ ಕ್ರಿಯೆಗಳನ್ನು ಲೋಕದೃಷ್ಟಿಯಿಂದ ಜ್ಞಾನಿಯಲ್ಲಿ ಅಧ್ಯಾರೋಪ ಮಾಡಿ ಜ್ಞಾನಿಯೂ ಸಹ ತನ್ನ ಪ್ರಕೃತಿಗೆ ಅನುಸಾರವಾಗಿ ಚೇಷ್ಟೆ ಮಾಡುತ್ತಾನೆಂದು ಹೇಳಲ್ಪಡುತ್ತದೆ. ಜ್ಞಾನಿಯ ಕ್ರಿಯೆಗಳು ಕರ್ತೃತ್ವವಿಲ್ಲದೆ ನಡೆಯುವುದರಿಂದ ರಾಗ-ದ್ವೇಷ ಮತ್ತು ಅಹಂಕಾರ-ಮಮಕಾರಗಳಿಂದ ಸರ್ವಥಾ ಶೂನ್ಯವಾಗಿರುತ್ತವೆ ಇವುಗಳನ್ನು ಕುರಿತು ಕರ್ಮವೆಂದು ಹೇಳದೆ ಚೇಷ್ಟಾ ಮಾತ್ರವೆಂದು ಹೇಳಬೇಕು. ಈ ಭಾವವನ್ನು ಪ್ರಕಟಮಾಡುವುದಕ್ಕಾಗಿ ಚೇಷ್ಟತೆ ಎಂಬ ಕ್ರಿಯೆಯು ಪ್ರಯೋಗವಾಗಿದೆ.

ಪ್ರಶ್ನೆ : ಜ್ಞಾನಿಯ ಅಂತಃಕರಣದಲ್ಲಿ ರಾಗ–ದ್ವೇಷ ಮತ್ತು ಹರ್ಷ–ಶೋಕಾದಿ ವಿಕಾರಗಳು ಇರುವುದೇ ಇಲ್ಲವೆಂದು ಹೇಳಬೇಕೆ ? ಅಥವಾ ಅವು ಇರುತ್ತವೆಯೇ ? ಜ್ಞಾನಿಗೆ ಅವುಗಳ ಸಂಬಂಧವಿರುವುದಿಲ್ಲವೆಂದರೆ ಈ ಅಂತಃಕರಣದಲ್ಲಿ ವಿಕಾರವಿಲ್ಲವೆಂದು ಹೇಳಬೇಕೆ ? ಹಾಗೆ ಹೇಳುವುದಾದರೆ ಅವನ ಅಂತಃಕರಣದಲ್ಲಿ ಶಮ, ದಮ, ತಿತಿಕ್ಷೆ, ಸಂತೋಷಾದಿ ಸದ್ಗುಣಗಳು ಅವನಲ್ಲಿ ಇರಬಾರದಲ್ಲವೆ ?

ಉತ್ತರ : ಜ್ಞಾನಿಗೆ ಅಂತಃಕರಣದೊಂದಿಗೆ ಸಂಬಂಧವಿರುವುದಿಲ್ಲ ಅಂದ ಮೇಲೆ ಅಂತಃಕರಣ ವಿಕಾರಗಳಿಂದ ಹೇಗೆ ಸಂಬಂಧವಿರುತ್ತದೆ ? ಕಿಂತು ಹೀಗಿದ್ದರೂ ಸಾಧನ ಚತುಷ್ಟಯ ಸಂಪತ್ತನ್ನು ಗಳಿಸಿದ್ದರಿಂದ ಅವನ ಅಂತಃಕರಣವು ಅತ್ಯಂತ ಪವಿತ್ರವಾಗಿರುತ್ತದೆ, ನಿರಂತರ ಆತ್ಮಚಿಂತನೆ ಮಾಡುತ್ತ ಅಲ್ಲಿಯ ಮಲ, ವಿಕ್ಷೇಪ ಮತ್ತು ಆವರಣವೆಂಬ ಮೂರು ದೋಷಗಳೂ ಸಹ ನಾಶವಾಗಿರುತ್ತವೆ. ಆಗಲೇ ಸಾಧಕನಿಗೆ ಬ್ರಹ್ಮಪ್ರಾಪ್ತಿಯಾಗುತ್ತದೆ ಈ ಕಾರಣದಿಂದ ಅವನ ಅಂತಃಕರಣದಲ್ಲಿ ಅವಿದ್ಯಾ ಮೂಲಕವಾದ ಅಹಂಕಾರ, ಮಮಕಾರ, ರಾಗ–ದ್ವೇಷ, ಹರ್ಷ–ಶೋಕ, ದಂಭ, ಕಪಟ, ಕಾಮ–ಕ್ರೋಧ, ಲೋಭ–ಮೋಹ ಮೊದಲಾದ ವಿಕಾರಗಳು ಇರಲಾರವು ಇವುಗಳು ಅವನಲ್ಲಿ ಸರ್ವಥಾ ಅಭಾವವಾಗಿರುತ್ತವೆ ಅತಏವ ಜ್ಞಾನೀ ಪುರುಷನ ಪವಿತ್ರವಾದ ಅಂತಃಕರಣದಲ್ಲಿ ಕೇವಲ ಸಮತಾ, ಸಂತೋಷ, ದಯಾ, ಕ್ಷಮಾ, ನಿಃಸ್ಪೃಹತಾ, ಶಾಂತಿ ಮೊದಲಾದ ಸದ್ಗುಣಗಳು ಸ್ವಾಭಾವಿಕವಾಗಿ ಸ್ಫುರಿಸುತ್ತಿರುತ್ತವೆ. ಮತ್ತು ಆ ಸಂಸ್ಕಾರಗಳಿಗನುಸಾರವಾಗಿ ಲೋಕಸಂಗ್ರಹಾರ್ಥವಾಗಿ ಅವನ ಮನಸ್ಸು, ಇಂದ್ರಿಯ ಮತ್ತು ಶರೀರ ದ್ವಾರಾ ಶಾಸ್ತ್ರ ವಿಹಿತ ಕರ್ಮವು ಮಾಡಲ್ಪಡುತ್ತದೆ ದುರ್ಗುಣ, ದುರಾಚಾರಾದಿಗಳು ಇರುವುದೇ ಇಲ್ಲ

ಪ್ರಶ್ನೆ . ಇತಿಹಾಸ ಮತ್ತು ಪುರಾಣಗಳ ಕಥೆಗಳಿಗನುಸಾರವಾಗಿ ನೋಡಿದರೆ ಎಷ್ಟೋ ಜ್ಞಾನಿಗಳ ಅಂತಃಕರಣದಲ್ಲಿ ಕಾಮಕ್ರೋಧಾದಿ ದುರ್ಗುಣಗಳು ಇದ್ದಂತೆಯೂ, ಅವರು ಕ್ರಿಯೆಗಳನ್ನು ಮಾಡುತ್ತಿರುವಂತೆಯೂ ತೋರುತ್ತವೆ ಇದನ್ನು ಹೇಗೆ ತಿಳಿಯಬೇಕು ?

ಉತ್ತರ ಉದಾಹರಣೆಗಿಂತ ವಿಧಿ ವಾಕ್ಯವು ಬಲವತ್ತರವಾಗಿವೆ ಮತ್ತು ವಿಧಿವಾಕ್ಯಗಳಿಗಿಂತಲೂ ನಿಷೇಧಪರ ವಾಕ್ಯಗಳು ಅತ್ಯಧಿಕ ಬಲವಂತವಾಗಿರುತ್ತವೆ ಇದಲ್ಲದ ಇತಿಹಾಸ– ಪುರಾಣಗಳ ಕಥೆಗಳಲ್ಲಿ ದೊರೆಯುವ ಉದಾಹರಣೆಗಳ ರಹಸ್ಯವು ಸರಿಯಾಗಿ ತಿಳಿಯುವುದು ಕಷ್ಟ. ಆದುದರಿಂದ ಯಾರ ಅಂತಃಕರಣದಲ್ಲಿ ನಿಜವಾಗಿ ಕಾಮ ಕ್ರೋಧಾದಿಗಳು ಮೊದಲಾದ ದುರ್ಗುಣಗಳ ಪ್ರಾದುರ್ಭಾವವಾಗುತ್ತಿದ್ದರೆ ಮತ್ತು ಅವನು ದುರ್ಗುಣಗಳಿಗನುಸಾರವಾಗಿ ಕ್ರಿಯೆಯನ್ನು ಮಾಡುತ್ತಿದ್ದರೆ ಅವನು ಜ್ಞಾನಿಯಲ್ಲವೆಂತಲೇ ಹೇಳಬೇಕು ಯಾಕೆಂದರೆ ಜ್ಞಾನಿಗಳ ಅಂತಃಕರಣದಲ್ಲಿ ಕಾಮಕ್ರೋಧಾದಿ ದುರ್ಗುಣ ಇರಬಹುದೆಂಬ ಮಾತು ಶಾಸ್ತ್ರದಲ್ಲಿ ಎಲ್ಲಿಯೂ ದೊರೆಯುವುದಿಲ್ಲ ಆದರೆ ಇದನ್ನು ನಿಷೇಧ ಮಾಡುವ ವಾಕ್ಯಗಳು ಅನೇಕ ಸ್ಥಾನದಲ್ಲಿ ದೊರೆಯುತ್ತವೆ. ಗೀತೆಯಲ್ಲಿಯೂ ಮಹಾಪುರುಷರ ಲಕ್ಷಣಗಳನ್ನು ವರ್ಣಿಸುವಾಗ ಜ್ಞಾನಿಯಲ್ಲಿ ಕಾಮ–ಕ್ರೋಧಾದಿ ದುರ್ಗುಣಗಳ ಅಭಾವವನ್ನು ಹೇಳಿದೆ. ಒಂದು ವೇಳೆ ಜ್ಞಾನಿಯು ಲೋಕಸಂಗ್ರಹಕ್ಕಾಗಿ ನಟನೆಯಂತೆ ಚೇಷ್ಟೆ ಮಾಡಿದ್ದಾದರೆ ಅದನ್ನು ದೋಷವೆಂದು ಎಣಿಸಬಾರದು.

ಪ್ರಶ್ನೆ : ಮತ್ತೆ ಅದರಲ್ಲಿ ಯಾರ ಹಠವು ಏನು ಮಾಡುತ್ತದೆ ಎಂದರೇನು ?

ಉತ್ತರ : ಯಾವ ಮನುಷ್ಯನೂ ಹಠಪೂರ್ವಕ ಕ್ಷಣಮಾತ್ರವೂ ಕರ್ಮವನ್ನು ಮಾಡದೆ ಇರಲಾಗುವುದಿಲ್ಲವೆಂದು ಇದೇ ಅಧ್ಯಾಯದ ಐದನೆಯ ಶ್ಲೋಕದಲ್ಲಿಯೂ ಮತ್ತು ಪ್ರಕೃತಿಯು ಬಲಪೂರ್ವಕ ಮಾಡಿಸುವುದೆಂದು ಹದಿನೆಂಟನೆಯ ಅಧ್ಯಾಯದ ಐವತ್ತೊಂಬತ್ತನೆ ಶ್ಲೋಕದಲ್ಲಿಯೂ ಹೇಳಿರುವುದರಿಂದ ಮನುಷ್ಯನು ವಿಹಿತ ಕರ್ಮಗಳನ್ನು ತ್ಯಾಗಮಾಡಿ ಕರ್ಮಬಂಧನದಲ್ಲಿ ತಪ್ಪಿಸಿಕೊಳ್ಳುವ ಆಗ್ರಹವನ್ನು ಮಾಡದೆ ಸ್ವಭಾವನಿಯತವಾದ ಕರ್ಮವನ್ನು ಮಾಡುತ್ತ ಕರ್ಮಬಂಧನದಿಂದ ತಪ್ಪಿಸಿಕೊಳ್ಳುವ ಪ್ರಯತ್ನ ಮಾಡಬೇಕು. ಇದರಲ್ಲಿಯೇ ಮನುಷ್ಯನು ಸಫಲನಾಗಬಲ್ಲನು. ವಿಹಿತ ಕರ್ಮದ ತ್ಯಾಗದಿಂದ ಮನುಷ್ಯನು ಸ್ವೇಚ್ಛಾಚಾರಿಯಾಗಿ ಮೊದಲಿಗಿಂತಲೂ ಅಧಿಕವಾದ ಕರ್ಮಬಂಧನದಲ್ಲಿ ಬೀಳುತ್ತಾನೆ. ಅದರಿಂದ ಅವನ ಪತನವು ತಪ್ಪಿದ್ದಲ್ಲ.

ಪ್ರಶ್ನೆ ಒಂದು ಪಕ್ಷ ಎಲ್ಲರೂ ಪ್ರಕೃತಿಯ ನಿಯಮಕ್ಕೆ ವಶರಾಗಿ ಕರ್ಮವನ್ನು ಮಾಡಲೇಬೇಕು ಅಂದ ಮೇಲೆ ವಿಧಿ-ನಿಷೇಧಾತ್ಮಕವಾದ ಶಾಸ್ತ್ರದ ಗತಿಯೇನು ? ಸ್ವಭಾವಾನುಸಾರ ಮನುಷ್ಯನು ಶುಭಾಶುಭ ಕರ್ಮಗಳನ್ನು ಮಾಡುತ್ತಿರುತ್ತಾನೆ. ಕರ್ಮಕ್ಕೆ ಅನುಸಾರವಾಗಿ ಅವನ ಪ್ರಕೃತಿಯು ಅಂದರೆ ಸ್ವಭಾವವು ಆಗುತ್ತಿರುತ್ತದೆ ಈ ಪರಿಸ್ಥಿತಿಯಲ್ಲಿ ಮನುಷ್ಯನ ಉತ್ಥಾನ ಹೇಗೆ ?

ಉತ್ತರ . ಶಾಸ್ತ್ರಕ್ಕೆ ವಿರುದ್ಧವಾದ ಕರ್ಮಗಳು ರಾಗದ್ವೇಷಾದಿ ದುರ್ಗುಣಗಳಿಂದ ಆಗುತ್ತವೆ ಮತ್ತು ಶಾಸ್ತ್ರವಿಹಿತ ಸದ್ಗುಣಗಳಿಗೆ ಶ್ರದ್ಧಾ, ಭಕ್ತಿ ಮೊದಲಾದ ಸದ್ಗುಣಗಳು ಪ್ರಧಾನ ಕಾರಣವಾಗಿರುತ್ತವೆ. ರಾಗ-ದ್ವೇಷ ಕಾಮ-ಕ್ರೋಧಾದಿ ದುರ್ಗುಣಗಳನ್ನು ತ್ಯಜಿಸುವುದರಿಂದಲೂ ಮತ್ತು ಶ್ರದ್ಧಾ, ಭಕ್ತಿ ಮೊದಲಾದ ಸದ್ಗುಣಗಳನ್ನು ಜಾಗ್ರತ ಮಾಡಿಕೊಳ್ಳುವುದರಿಂದಲೂ, ಅವುಗಳನ್ನು ಅಭಿವೃದ್ಧಿ ಮಾಡುವುದರಿಂದಲೂ ಮನುಷ್ಯನು ಸ್ವತಂತ್ರನು ಆದುದರಿಂದ ದುರ್ಗುಣಗಳನ್ನು ತ್ಯಜಿಸಿ ಸದ್ಗುರುವಿನಲ್ಲಿಯೂ, ಸಚ್ಛಾಸ್ತ್ರದಲ್ಲಿಯೂ ಶ್ರದ್ಧಾ ಭಕ್ತಿಗಳನ್ನಿಟ್ಟು ಈಶ್ವರ ಪ್ರೀತ್ಯರ್ಥವಾಗಿ ಕರ್ಮಗಳನ್ನು ಆಚರಿಸಬೇಕು. ಈ ಆದರ್ಶವನ್ನು ಎದುರಿಗಿಟ್ಟುಕೊಂಡು ಕರ್ಮ ಮಾಡುವ ಮನುಷ್ಯನಿಂದ ನಿಷಿದ್ಧಕರ್ಮವು ಸಂಭವಿಸುವುದಿಲ್ಲ. ನಡೆದ ಶುಭ ಕರ್ಮಗಳು ಮುಕ್ತಿಪ್ರದವಾಗಿರುತ್ತವೆಯೇ ವಿನಹ ಬಂಧನಕಾರಿಗಳಲ್ಲ ಸಾರಾಂಶವೇನೆಂದರೆ, ಮನುಷ್ಯನು ಕರ್ಮವನ್ನು ತಡೆಯುವುದರಲ್ಲಿ ಸ್ವತಂತ್ರನಲ್ಲ ಅವನು ಕರ್ಮವನ್ನು ಮಾಡಲೇಬೇಕು. ಆದರೆ ಸದ್ಗುಣಗಳನ್ನು ಆಶ್ರಯಿಸಿ ತನ್ನ ಪ್ರಕೃತಿಯನ್ನು ಸುಧಾರಿಸಿಕೊಳ್ಳಲು ಎಲ್ಲರಿಗೂ ಸ್ವಾತಂತ್ರ್ಯವಿರುತ್ತದೆ ಸ್ವಭಾವವು ಸುಧಾರಿಸಿದಂತೆ ಕ್ರಿಯೆಗಳೂ ಸಹ ಪವಿತ್ರವಾಗುತ್ತಾ ಹೋಗುತ್ತವೆ ಇದೇ ಉತ್ಥಾನದ ಮಾರ್ಗ.

ಈ ಶ್ಲೋಕದ ಸಾರಾಂಶ . ಒಳ್ಳೆಯದನ್ನು ಕೆಟ್ಟದ್ದನ್ನು ಬಿಡಿಸಿ ತಿಳಿಯ ಬಲ್ಲವನೂ ಸಹ ತನ್ನ ಹುಟ್ಟುಗುಣಕ್ಕೆ ಅಂದರೆ ಹಿಂದಿನ ಅನೇಕ ಜನ್ಮಗಳಲ್ಲಿ ಮಾಡಿದ ಧರ್ಮಾಧರ್ಮಗಳ ಪರಿಣಾಮವಾಗಿ ಈ ಜನ್ಮದಲ್ಲಿ ಬಂದಿರುವ ಮನಸ್ಸಿನ ಸಂಸ್ಕಾರಕ್ಕೆ ಸರಿಯಾಗಿ ನಡೆಯುವನು. ಏಕೆಂದರೆ ಸಹಜವಾಗಿ ಎಲ್ಲಾ ಪ್ರಾಣಿಗಳೂ ಹುಟ್ಟುಗುಣವನ್ನು ಹಿಂಬಾಲಿಸುತ್ತವೆ. ಅವನ್ನು

ನುಟ್ಟಿ ತುಳಿಯುವ ಉದ್ಯೋಗವು ಸಾಗಲಾರದು. ಹೀಗೆ ಸಾಮಾನ್ಯವಾಗಿ ಹುಟ್ಟುಗುಣವನ್ನು ಎದುರಿಸುವುದು ಬಹು ಬಿಗಿಯಾದ ಕೆಲಸವಾದುದರಿಂದ ಪಾಪವು ನರಕಕ್ಕೆ ಸಾಧನವೆಂದು ತಿಳಿದಿದ್ದರೂ ಮನುಷ್ಯನು ತನ್ನ ಮನಸ್ಸಿನಲ್ಲಿರುವ ಬಲವಾದ ಪಾಪ ಸಂಸ್ಕಾರದ ಪ್ರೇರಣೆಯಿಂದ ಪಾಪಕರ್ಮದಲ್ಲಿಯೇ ಮುಂದುವರಿಯುತ್ತಾನೆ

ಸಂಬಂಧ. ಹೀಗೆ ಪುರುಷ ಪ್ರಯತ್ನವೇನೂ ಸಾಗದ ಮೇಲೆ ಇಂಥದ್ದನ್ನು ಮಾಡೆಂದೂ ಅಥವಾ ಇಂಥದ್ದನ್ನು ಬಿಡೆಂದೂ ಹೇಳುವ ಶಾಸ್ತ್ರಗಳೆಲ್ಲ ಕೆಲಸಕ್ಕೆ ಬಾರದೆ ಹೋಗುವುದಿಲ್ಲ ಅಂದರೆ:

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪಂಥಿನೌ ॥೩೪॥**

ತಾ. ಎಲ್ಲಾ ಇಂದ್ರಿಯಗಳ ವಿಷಯದಲ್ಲಿ ರಾಗದ್ವೇಷಗಳು ನೆಲೆಗೊಂಡಿರುತ್ತವೆ ಇವೆರಡಕ್ಕೆ ವಶವಾಗಬಾರದು, ಯಾಕೆಂದರೆ ಇವು ಅವನ ಶತ್ರುಗಳು.

## ವಿವರಣೆ

ಪ್ರಶ್ನೆ ಇಲ್ಲಿ "ಅರ್ಥೇ" ಪದದೊಂದಿಗೆ ಸಂಬಂಧವನ್ನು ಇಡುವ "ಇಂದ್ರಿಯಸ್ಯ" ಪದವನ್ನು ಎರಡು ಸಾರಿ ಪ್ರಯೋಗ ಮಾಡುವ ಅಭಿಪ್ರಾಯವೇನು ?

ಉತ್ತರ ಶ್ರೋತ್ರಾದಿ ಜ್ಞಾನೇಂದ್ರಿಯ, ವಾಗಾದಿ ಕರ್ಮೇಂದ್ರಿಯ ಮತ್ತು ಅಂತಃಕರಣ – ಈ ಎಲ್ಲವನ್ನು ಗ್ರಹಿಸುವುದಕ್ಕಾಗಿ ಮತ್ತು ಅವುಗಳಲ್ಲಿ ಪ್ರತ್ಯೇಕ ಇಂದ್ರಿಯಗಳ ಪ್ರತ್ಯೇಕ ವಿಷಯಗಳಲ್ಲಿ ಬೇರೆ ಬೇರೆ ರಾಗ ದ್ವೇಷಗಳ ಸ್ಥಿತಿಯನ್ನು ತೋರಿಸುವುದಕ್ಕಾಗಿ ಇಲ್ಲಿ "ಅರ್ಥೇ" ಪದದೊಂದಿಗೆ ಸಂಬಂಧವನ್ನಿಡುವ "ಇಂದ್ರಿಯಸ್ಯ" ಎಂಬ ಪದವು ಎರಡು ಸಾರಿ ಪ್ರಯೋಗವಾಗಿದೆ ಅಭಿಪ್ರಾಯವೇನೆಂದರೆ – ಯಾವುದರಲ್ಲಿ ಅಂತಃಕರಣ ಸಹಿತವಾದ ಸಮಸ್ತ ಇಂದ್ರಿಯಗಳಿಗೆ ಇರುವ ಭಿನ್ನ ಭಿನ್ನ ವಿಷಯಗಳು ಇರುವುವೋ, ಯಾವುದ

ರೊಂದಿಗೆ ಇಂದ್ರಿಯಗಳ ಸಂಯೋಗವಾಗುತ್ತಿರುವುದೋ ಆ ಎಲ್ಲಾ ವಿಷಯ ಗಳಲ್ಲಿಯೂ ರಾಗ-ದ್ವೇಷಗಳೆರಡೂ ಬೇರೆಬೇರೆಯಾಗಿ ಅಡಗಿರುತ್ತವೆ

ಪ್ರಶ್ನೆ : ಇಂದ್ರಿಯಗಳ ಅರ್ಥದಲ್ಲಿ ಇಂದ್ರಿಯಗಳ ರಾಗ-ದ್ವೇಷಗಳು ಅಡಗಿರುತ್ತವೆ ಅಂದರೆ ಆಗುವ ಹಾನಿಯೇನು ?

ಉತ್ತರ · ಇಂಥಾ ಕ್ಲಿಷ್ಟವಾದ ಅರ್ಥವನ್ನು ಮಾಡಿದರೂ ನಿಜವಾದ ಭಾವವು ವ್ಯಕ್ತವಾಗುವುದಿಲ್ಲ. ಯಾಕೆಂದರೆ ಇಂದ್ರಿಯಗಳೂ ಅನೇಕ, ಅವುಗಳ ವಿಷಯಗಳೂ ಅನೇಕವಾಗಿವೆ. ಹೀಗಿರುವಾಗ ಒಂದೇ ಇಂದ್ರಿಯದ ವಿಷಯ ದಲ್ಲಿ ಒಂದೇ ಇಂದ್ರಿಯದ ರಾಗದ್ವೇಷವಿರುತ್ತದೆ- ಎಂಬುದು ಹೇಗೆ ಸಾರ್ಥಕ ವಾಗುತ್ತದೆ ? ಈ ಕಾರಣದಿಂದ "ಇಂದ್ರಿಯಸ್ಯ-ಇಂದ್ರಿಯಸ್ಯ" ಅಂದರೆ "ಸರ್ವೇಂದ್ರಿಯಾಣಾಮ್" ಈ ಪ್ರಯೋಗವನ್ನು ಒಪ್ಪಿ ಮೇಲೆ ಹೇಳಿದ ಅರ್ಥವನ್ನು ಸ್ವೀಕರಿಸುವುದೇ ಸರಿಯಾಗಿ ಕಾಣುತ್ತದೆ

ಪ್ರಶ್ನೆ : ಪ್ರತ್ಯೇಕ ಇಂದ್ರಿಯದ ವಿಷಯದಲ್ಲಿ ರಾಗ ಮತ್ತು ದ್ವೇಷ ಎರಡೂ ಹೇಗೆ ಅಡಗಿರುತ್ತವೆ ? ಮತ್ತು ಅವುಗಳಿಗೆ ವಶವಾಗಬಾರದು ಅಂದ ರೇನು ?

ಉತ್ತರ : ಯಾವ ವಸ್ತು, ಪ್ರಾಣಿ, ಅಥವಾ ಘಟನೆಯಲ್ಲಿ ಮನುಷ್ಯ ನಿಗೆ ಸುಖ ಪ್ರತೀತಿಯಾಗುವುದೋ, ಮತ್ತು ಯಾವುದು ಅನುಕೂಲ ಪದಾರ್ಥವೋ ಅದರಲ್ಲಿ ಅವನಿಗೆ ಆಸಕ್ತಿಯುಂಟಾಗುತ್ತದೆ ಅದಕ್ಕೆ ರಾಗ ವೆನ್ನುತ್ತಾರೆ ಮತ್ತು ಮನುಷ್ಯನಿಗೆ ಯಾವುದರಲ್ಲಿ ದುಃಖದ ಪ್ರತೀತಿಯಾಗು ವುದೋ, ಯಾವುದು ಪ್ರತಿಕೂಲವಾಗಿರುವುದೋ ಅದರಲ್ಲಿ ಅವನಿಗೆ ದ್ವೇಷ ವುಂಟಾಗುತ್ತದೆ ವಾಸ್ತವವಾಗಿ ಯಾವ ವಸ್ತುವಿನಲ್ಲಿಯೂ ಸುಖ ಮತ್ತು ದುಃಖವಿರುವುದಿಲ್ಲ ಮನುಷ್ಯನ ಭಾವನೆಗೆ ಅನುಸಾರವಾಗಿ ಒಂದೇ ವಸ್ತು ಒಬ್ಬನಿಗೆ ಸುಖಪ್ರದವಾಗಿಯೂ, ಮತ್ತೊಬ್ಬನಿಗೆ ದುಃಖಪ್ರದವಾಗಿಯೂ ತೋರುತ್ತದೆ. ಇಷ್ಟೇ ಅಲ್ಲ, ಒಬ್ಬನಿಗೆ ಒಂದು ವಸ್ತುವು ಒಂದು ಸಮಯದಲ್ಲಿ ಸುಖವಾಗಿ ತೋರಿದ್ದು, ಅದೇ ವಸ್ತು ಅವನಿಗೆ ಮತ್ತೊಂದು ಸಮಯದಲ್ಲಿ ದುಃಖಪ್ರದವಾಗಿ ಪ್ರತೀತಿಯಾಗುತ್ತದೆ. ಅತಏವ ಪ್ರತ್ಯೇಕ ಇಂದ್ರಿಯದ

ವಿಷಯದಲ್ಲಿ ರಾಗದ್ವೇಷಗಳು ಅಡಗಿರುತ್ತವೆ, ಅಂದರೆ ಎಲ್ಲಾ ವಸ್ತುಗಳಲ್ಲಿ ರಾಗ–ದ್ವೇಷಗಳು ಎರಡೂ ಇರುತ್ತವೆ ಯಾಕೆಂದರೆ ಮನುಷ್ಯನಿಗೆ ಅವುಗಳೊಂದಿಗೆ ಸಂಯೋಗ ವಿಯೋಗವಾದಾಗ ರಾಗ–ದ್ವೇಷಗಳ ಪ್ರಾದುರ್ಭಾವವಾಗುತ್ತದೆ.

ಅತಏವ ಶಾಸ್ತ್ರವಿಹಿತವಾದ ಕರ್ತವ್ಯ ಕರ್ಮಗಳ ಆಚರಣೆಯನ್ನು ಮಾಡುತ್ತಾ ಮನ ಮತ್ತು ಇಂದ್ರಿಯಗಳೊಂದಿಗೆ ವಿಷಯಗಳು ಸಂಯೋಗ ವಿಯೋಗವಾಗುವಾಗ, ಯಾವ ವಸ್ತುವಿನಲ್ಲಿಯೂ ಯಾವ ಪ್ರಾಣಿಯಲ್ಲಿಯೂ, ಯಾವ ಕ್ರಿಯೆಯಲ್ಲಿಯೂ ಮತ್ತು ಯಾವ ಘಟನೆಯಲ್ಲಿಯೂ ಪ್ರಿಯಾಪ್ರಿಯ ಭೇದವಿಲ್ಲದೆ ಸಿದ್ಧ–ಅಸಿದ್ಧ, ಜಯ–ಪರಾಜಯ, ಮತ್ತು ಲಾಭ–ಹಾನಿ ಮೊದಲಾದುವುಗಳಲ್ಲಿ ಸಮಭಾವದಿಂದ ಇರಬೇಕು ಕಿಂಚಿನ್ಮಾತ್ರವೂ ಹರ್ಷ–ಶೋಕವನ್ನು ಮಾಡಬಾರದು. ಈ ರೀತಿಯಿಂದ ಇರುವುದಕ್ಕೆ ರಾಗ–ದ್ವೇಷಗಳಿಗೆ ವಶನಾಗಬಾರದು ಎಂದು ಹೇಳಲ್ಪಡುತ್ತದೆ. ಯಾಕೆಂದರೆ ರಾಗ–ದ್ವೇಷದ ವಶನಾಗುವುದರಿಂದ ಮನುಷ್ಯನಿಗೆ ಎಲ್ಲೆಲ್ಲಿಯೂ ವಿಷಮ ಬುದ್ಧಿಯುಂಟಾಗಿ ಅಂತಃಕರಣದಲ್ಲಿ ಹರ್ಷ–ಶೋಕಾದಿಗಳು ಉಂಟಾಗುತ್ತವೆ. ಮನುಷ್ಯನು ಈಶ್ವರನ ಶರಣಾಗತಿಯ ಬಲದಿಂದ ರಾಗ–ದ್ವೇಷಗಳಿಂದ ಅತೀತನಾಗಬೇಕು.

ಪ್ರಶ್ನೆ · ರಾಗ–ದ್ವೇಷ ಈ ಎರಡೂ ಮನುಷ್ಯನ ಶ್ರೇಯೋಮಾರ್ಗದಲ್ಲಿ ವಿಘ್ನವನ್ನುಂಟುಮಾಡುವ ಶತೃಗಳೆಂದರೇನು ?

ಉತ್ತರ : ಮನುಷ್ಯನು ಅಜ್ಞಾನಕ್ಕೆ ವಶನಾಗಿ ರಾಗ–ದ್ವೇಷಗಳ ಹಿಡಿತಕ್ಕೆ ಸಿಕ್ಕಿ ವಿನಾಶಶೀಲವಾದ ಭೋಗಗಳನ್ನು ಸುಖಕ್ಕೆ ಹೇತುವೆಂದು ತಿಳಿದು ಶ್ರೇಯೋಮಾರ್ಗದಿಂದ ಭ್ರಷ್ಟನಾಗುತ್ತಾನೆ. ರಾಗ–ದ್ವೇಷಗಳು ಸಾಧಕನಿಗೆ ಮೋಸ ಮಾಡಿ ವಿಷಯಗಳಲ್ಲಿ ತೊಡಗಿಸುತ್ತವೆ. ಮತ್ತು ಅವನ ಶ್ರೇಯೋಮಾರ್ಗದಲ್ಲಿ ವಿಘ್ನವನ್ನುಂಟುಮಾಡಿ ಮನುಷ್ಯ ಜೀವನವೆಂಬ ಅಮೂಲ್ಯ ದನವನ್ನು ಸೆಳೆದುಕೊಳ್ಳುತ್ತವೆ. ಇದರಿಂದ ಮನುಷ್ಯನು ಪರಮ ಫಲಕ್ಕೆ ವಂಚಿತನಾಗುತ್ತಾನೆ. ಇಷ್ಟೇ ಅಲ್ಲ, ರಾಗ–ದ್ವೇಷಕ್ಕೆ ವಶನಾಗಿ ವಿಷಯ ಭೋಗ

ಕ್ಕಾಗಿ ಸ್ವಧರ್ಮವನ್ನು ತ್ಯಜಿಸಿ, ಪರಧರ್ಮವನ್ನೂ ಅನೇಕ ವಿಧವಾದ ನಿಷಿದ್ಧ ಕರ್ಮಗಳನ್ನೂ ಆಚರಿಸಬೇಕಾಗುತ್ತದೆ ಫಲ ಸ್ವರೂಪವಾಗಿ ಸತ್ತನಂತರ ದುರ್ಗತಿಗೆ ಗುರಿಯಾಗುತ್ತಾನೆ. ಆದುದರಿಂದ ರಾಗ–ದ್ವೇಷಗಳು ಪರಿಪಂಥ ಅಂದರೆ ಸನ್ಮಾರ್ಗಕ್ಕೆ ವಿಘ್ನವನ್ನುಂಟುಮಾಡುವ ಶತೃಗಳೆಂದು ಹೇಳಿದೆ

ಪ್ರಶ್ನೆ . ಈ ರಾಗ–ದ್ವೇಷಗಳು ಸಾಧಕನ ಕಲ್ಯಾಣ ಮಾರ್ಗದಲ್ಲಿ ಹೇಗೆ ವಿಘ್ನವನ್ನುಂಟುಮಾಡುತ್ತವೆ ? ಉದಾಹರಣೆ ಏನು ?

ಉತ್ತರ ಹೇಗೆ ತನ್ನ ನಿಶ್ಚಿತ ಸ್ಥಾನಕ್ಕೆ ಹೋಗುವುದಕ್ಕಾಗಿ ದಾರಿ ಹಿಡಿದು ಹೋಗುವ ಪ್ರಯಾಣಿಕನಿಗೆ ಮಾರ್ಗದಲ್ಲಿ ವಿಘ್ನವನ್ನುಂಟುಮಾಡುವ ದಾರಿಗಳ್ಳರು ಸಿಕ್ಕರೆ ಅವರು ಮಿತ್ರರೆಂದು ತೋರಿಸಿಕೊಂಡು ಮತ್ತು ಅವರ ಸಂಗಡಿಗರೊಂದಿಗೆ ಸೇರಿ ಅವರಿಂದ ಅವರ ಬುದ್ಧಿಯಲ್ಲಿ ಭ್ರಮೆಯನ್ನುಂಟು ಮಾಡಿ, ವಿವೇಕ ಶಕ್ತಿಯನ್ನು ಅಪಹರಿಸಿ, ಅವನಿಗೆ ವಿಷಯ ಸುಖಗಳಲ್ಲಿ ಪ್ರಲೋಭನವನ್ನು ತೋರಿಸಿ, ತಮ್ಮ ಮಾತಿನಲ್ಲಿ ಸಿಗಿಸಿ, ಅವನನ್ನು ತನ್ನ ಗಂತವ್ಯ ಸ್ಥಾನದ ಕಡೆಗೆ ಹೋಗದಂತೆ ಮಾಡಿ, ವಿಪರೀತವಾದ ಕಾಡಿನಲ್ಲಿ ಬಿಟ್ಟು ಬರುವಂತೆ ಮಾಡಿ, ಅವನ ಸರ್ವಸ್ವವನ್ನು ಲೂಟಿಮಾಡಿಕೊಂಡದ್ದಲ್ಲದೆ ದೊಡ್ಡದಾದ ತಗ್ಗಿನಲ್ಲಿ ಬೀಳುವಂತೆ ಮಾಡುತ್ತಾರೆ ಇದರಂತೆ ರಾಗ-ದ್ವೇಷ ಗಳು ಶ್ರೇಯೋಮಾರ್ಗದಲ್ಲಿ ನಡೆಯುವ ಸಾಧಕನ ಜೊತೆ ಹಾಕಿಕೊಂಡು ಮಿತ್ರತಾ ಭಾವವನ್ನು ತೋರಿಸಿ ಅವನ ಮನಸ್ಸು ಇಂದ್ರಿಯಗಳಲ್ಲಿ ಪ್ರವೇಶ ವಾಗಿ ಅವನ ವಿವೇಕ ಶಕ್ತಿಯನ್ನು ನಷ್ಟಮಾಡುವುದಲ್ಲದೆ ಅವನಿಗೆ ಸಾಂಸಾರಿಕ ಸುಖಗಳಲ್ಲಿ ಪ್ರಲೋಭನೆ ತೋರಿಸಿ ಪಾಪಾಚಾರದಲ್ಲಿ ಪ್ರವೃತ್ತರನ್ನಾಗಿ ಮಾಡುತ್ತವೆ ಇದರಿಂದ ಸಾಧಕನ ಸಾಧನೆಯು ನಷ್ಟವಾಗುತ್ತದೆ ಈ ಪಾಪದ ಫಲವನ್ನು ಭೋಗಿಸುವುದಕ್ಕಾಗಿ ಅವನು ಘೋರ ನರಕದಲ್ಲಿ ಬಿದ್ದು ಅನೇಕ ದುಃಖವನ್ನು ಭೋಗಿಸಬೇಕಾಗುತ್ತದೆ

ಸಂಕ್ಷೇಪ ಇಂದ್ರಿಯಗಳಿಗೆಲ್ಲ ವಿಷಯಗಳಲ್ಲಿ ರಾಗ–ದ್ವೇಷಗಳು ನಿಯತವಾ ಗಿರುತ್ತವೆ ಶಾಸ್ತ್ರಜ್ಞಾನವಿಲ್ಲದೆ ಬರೀ ಸ್ವಭಾವವನ್ನನುಸರಿಸಿ ನಡೆಯುವವರೇ ಯಾವುದಾದರೊಂದು ವಿಷಯವನ್ನು ಕಂಡಾಕ್ಷಣಕ್ಕೆ ಅದು ಬೇಕೆಂಬ ಪ್ರೀತಿಗೋ ಇಲ್ಲವೇ ಬೇಡವೆಂಬ ದ್ವೇಷಕ್ಕೋ ಒಳಗಾಗಿಬಿಡುತ್ತಾರೆ. ಶಾಸ್ತ್ರಾರ್ಥ

ವನ್ನು ತಿಳಿದು ನಡೆಯುವವರು ಶಾಸ್ತ್ರವು ಹೇಳಿದಂತೆ ಮಾಡುವೆವೆಂದು ಮಾಡಬೇಕೇ ಹೊರತು ಸ್ವಭಾವಕ್ಕನುಸಾರವಾಗಿ ತೋರುವ ರಾಗ-ದ್ವೇಷಗಳಿಗೆ ಒಳಗಾಗಬಾರದು. ಏಕೆಂದರೆ ರಾಗ-ದ್ವೇಷಗಳು ಈ ಮನುಷ್ಯನಿಗೆ ಶ್ರೇಯೋಮಾರ್ಗಕ್ಕೆ ವಿಘ್ನಗಳು.

ಸಂಬಂಧ : ಭಿಕ್ಷಾಚರಣೆಯು ಶಾಸ್ತ್ರವಿಹಿತವಾದ ಕರ್ಮವೇ ಆದುದರಿಂದ ದುಃಖರೂಪವಾದ ಯುದ್ಧ ಕರ್ಮವನ್ನು ಏಕೆ ಅನುಸರಿಸಬಾರದು ಎಂಬ ವಿಷಯವು ಮುಂದಿನ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುತ್ತದೆ.

**ಶ್ರೇಯಾನ್ ಸ್ವಧರ್ಮೋ ವಿಗುಣಃ। ಪರಧರ್ಮಾತ್ ಸ್ವನುಷ್ಠಿತಾತ್।**
**ಸ್ವಧರ್ಮೇ ನಿಧನಂ ಶ್ರೇಯಃ । ಪರಧರ್ಮೋ ಭಯಾವಹಃ ॥ ೩೫ ॥**

ತಾ . ಗುಣವಿಲ್ಲದ ಸ್ವಧರ್ಮವು ಚೆನ್ನಾಗಿ ಅನುಷ್ಠಾನ ಮಾಡಿದ ಪರಧರ್ಮಕ್ಕಿಂತಲೂ ಶ್ರೇಯಸ್ಕರವಾದದ್ದು. ಸ್ವಧರ್ಮದಲ್ಲಿ ಮರಣವು ಒಳ್ಳೆಯದು , ಪರಧರ್ಮವು ಭಯಂಕರವಾದದ್ದು.

## ವಿವರಣೆ

ಪ್ರಶ್ನೆ " ಸು-ಅನುಷ್ಠಿತಾತ್ " ಎಂಬ ವಿಶೇಷಣ ಸಹಿತವಾಗಿ 'ಪರಧರ್ಮಾತ್" ಎಂಬ ಪದವು ಯಾವ ಧರ್ಮದ ವಾಚಕ? ಮತ್ತು ಅದಕ್ಕಿಂತ ಗುಣರಹಿತ ಸ್ವಧರ್ಮವನ್ನು ಅತಿ ಉತ್ತಮವೆಂದು ಹೇಳಲು ಕಾರಣವೇನು ?

ಉತ್ತರ ಈ ವಾಕ್ಯದಲ್ಲಿ ಸ್ವಧರ್ಮ ಮತ್ತು ಪರಧರ್ಮಗಳನ್ನು ತುಲನೆ ಮಾಡುವುದರೊಂದಿಗೆ " ಸು-ಅನುಷ್ಠಿತ " ಎಂಬ ವಿಶೇಷಣವನ್ನು ಕೊಡಲಾಗಿದೆ. ಮತ್ತು "ಸ್ವಧರ್ಮ"ದೊಂದಿಗೆ "ವಿಗುಣ" ಎಂಬ ವಿಶೇಷಣವನ್ನು ಕೊಟ್ಟಿದೆ ಅತಃ ಪ್ರತ್ಯೇಕ ವಿಶೇಷಣದ ವಿರೋಧ ಭಾವವನ್ನು ಅವುಗಳೊಂದಿಗೆ ಅಧಿಕವಾಗಿ ತಿಳಿಯಬೇಕು ಅರ್ಥಾತ್ ಪರಧರ್ಮವನ್ನು ಸದ್ಗುಣಸಂಪನ್ನವಾಗಿಯೂ ಮತ್ತು ಸು-ಅನುಷ್ಠಿತವೆಂದೂ ತಿಳಿಯಬೇಕು. ತಥಾ ಸ್ವಧರ್ಮವನ್ನು ವಿಗುಣ ಮತ್ತು ಅನುಷ್ಠಾನದಲ್ಲಿ ಕಡಿಮೆ ಅಂದರೆ ದೋಷಯುಕ್ತವನ್ನಾಗಿ ತಿಳಿಯಬೇಕು. ಇದರೊಂದಿಗೆ ವೈಶ್ಯ ಕ್ಷತ್ರಿಯ ಮೊದಲಾದವು

ಗಳಿಗಿಂತ ಬ್ರಾಹ್ಮಣನ ವಿಶೇಷ ಧರ್ಮದಲ್ಲಿ ಅಹಿಂಸಾದಿ ಸದ್ಗುಣಗಳು ಅಧಿಕ ವಾಗಿರುತ್ತವೆ ಗೃಹಸ್ಥ ಧರ್ಮಕ್ಕಿಂತ ಸನ್ಯಾಸ ಧರ್ಮದಲ್ಲಿ ಸದ್ಗುಣಗಳು ಅಧಿಕವಾಗಿರುತ್ತವೆ. ಇದರಂತೆ ಶೂದ್ರ ಧರ್ಮಕ್ಕಿಂತ ವೈಶ್ಯ ಹಾಗೂ ಕ್ಷತ್ರಿಯ ಧರ್ಮಗಳಲ್ಲಿ ಸದ್ಗುಣಗಳು ಅಧಿಕವಾಗಿರುತ್ತವೆ – ಎಂಬ ವಿಷಯವನ್ನು ನೆನಪಿನಲ್ಲಿಟ್ಟುಕೊಂಡಿರಬೇಕು ಹೀಗೆ ತಿಳಿಯುವುದರಿಂದ ಯಾವ ಕರ್ಮವು ಗುಣಯುಕ್ತವಾಗಿದೆಯೋ ಮತ್ತು ಯಾವುದರ ಅನುಷ್ಠಾನವು ಪೂರ್ಣವಾಗಿ ಮಾಡಲ್ಪಟ್ಟಿರುವುದೋ ಹೀಗಿದ್ದರೂ ಅದು ಅನುಷ್ಠಾನ ಮಾಡುವವನಿಗೆ ವಿಹಿತ ವಲ್ಲದಿದ್ದರೆ, ಮತ್ತೊಬ್ಬರಿಗೆ ವಿಹಿತವಾಗಿದ್ದರೆ ಇಂಥಾ ಕರ್ಮಗಳನ್ನು ಕುರಿತು ಇಲ್ಲಿ "ಸು–ಅನುಷ್ಠಿತಾತ್" ಎಂಬ ವಿಶೇಷಣದೊಂದಿಗೆ "ಪರಧರ್ಮಾತ್" ಪದ ಪ್ರಯೋಗವಾಗಿದೆ. ಆ ಪರ ಧರ್ಮಕ್ಕಿಂತ ಸ್ವಧರ್ಮವು ಅತಿ ಉತ್ತಮ ವೆಂದು ಹೇಳಿ, ನೋಡುವುದಕ್ಕೆ ಕುರೂಪಿಯಾಗಿದ್ದರೂ ಮತ್ತು ಗುಣಹೀನ ನಾಗಿದ್ದರೂ ಸ್ತ್ರೀಯು ತನ್ನ ಪತಿಯನ್ನು ಸೇವಿಸುವುದು ಶ್ರೇಯಸ್ಕರ ಇದರಂತೆ ನೋಡುವುದಕ್ಕೆ ಸದ್ಗುಣಹೀನವಾಗಿದ್ದರೂ, ಹಾಗೆಯೇ ಅನುಷ್ಠಾನ ದಲ್ಲಿ ಅಂಗವೈಗುಣ್ಯವಿದ್ದರೂ, ಯಾವನಿಗೆ ಯಾವ ಧರ್ಮವು ವಿಹಿತವಾಗಿದ್ದರೂ ಅದೇ ಅವನಿಗೆ ಶ್ರೇಯಸ್ಕರ ಮತ್ತು ಪರಧರ್ಮವು ಸರ್ವಗುಣ ಸಂಪನ್ನವಾಗಿದ್ದು ಅದು ಸಾಂಗೋಪಾಂಗವಾಗಿ ಅನುಷ್ಠಾನ ಮಾಡಲ್ಪಟ್ಟಿದ್ದಾದರೆ ಅದನ್ನು ಹೇಳ ಬೇಕಾಗಿಯೇ ಇಲ್ಲ

ತಿಳಿದುಕೊಳ್ಳಬೇಕಾದ ವಿಷಯವೇನೆಂದರೆ, ಶಾಸ್ತ್ರದಲ್ಲಿ ತನಗೆ ವಿಹಿತ ವಾಗಿರುವ ಧರ್ಮವು ಗುಣದಲ್ಲಿ ಕೊರತೆಯಾದದ್ದೆಂದು ಕಂಡರೂ, ಅದನ್ನು ಆಚರಿಸುವುದು ಚೆನ್ನಾಗಿ ಆಚರಿಸಿದಂಥ ಮತ್ತೊಬ್ಬನಿಗೊಪ್ಪುವ ಧರ್ಮಕ್ಕಿಂತ ಎಂದರೆ ಮತ್ತೊಬ್ಬನಿಗೆ ಎಂದು ಶಾಸ್ತ್ರದಲ್ಲಿ ವಿಹಿತವಾಗಿರುವ ಧರ್ಮವನ್ನು ತಾನು ಚೆನ್ನಾಗಿ ನೆರವೇರಿಸಿದ್ದಕ್ಕಿಂತ ಮೇಲು. ಏಕೆಂದರೆ, ಶಾಸ್ತ್ರದಲ್ಲಿ ತನಗೆ ವಿಹಿತವಾಗಿರುವ ಧರ್ಮವನ್ನು ನಡೆಯಿಸುವುದರಲ್ಲಿ ಸಾವು ಒದಗಿದರೂ ಪರ ಧರ್ಮದಲ್ಲಿ ಬದುಕುವುದಕ್ಕಿಂತ ಒಳ್ಳೆಯದು ಹೇಗೆಂದರೆ ಅದರಿಂದ ಬದುಕಿರು ವಾಗ ಕೀರ್ತಿಯೂ ಸತ್ತಮೇಲೆ ಸ್ವರ್ಗವೂ ದೊರೆಯುವುವು. ಹೆಚ್ಚು ಗುಣವು ಕಂಡರೂ ಮತ್ತೊಬ್ಬನಿಗೆ ಹೇಳಿರುವ ಧರ್ಮವು ಭಯವನ್ನುಂಟುಮಾಡುವುದು ಹೇಗೆಂದರೆ, ಅದರಿಂದ ಬದುಕಿರುವಾಗ ಅಪಕೀರ್ತಿಯೂ ಸತ್ತಮೇಲೆ ನರಕ

ಪ್ರಾಪ್ತಿಯೂ ಆಗುತ್ತದೆ ಅರ್ಜುನನೇ, ನಿನಗೆ ಕ್ಷತ್ರಿಯ ಯುದ್ಧವು ಸ್ವಧರ್ಮ, ಭಿಕ್ಷಾಚರಣೆಯು ಪರಧರ್ಮ ನೀನು ಪರಧರ್ಮವನ್ನು ಹಿಡಿಯುವುದಕ್ಕಿಂತ ನಿನ್ನ ಧರ್ಮವಾದ ಯುದ್ಧದಲ್ಲಿ ಸಾಯುವುದೇ ಮೇಲು.

ಇನ್ನು ಆಧ್ಯಾತ್ಮಿಕ ದೃಷ್ಟಿಯಿಂದ ಸ್ವಧರ್ಮ ಮತ್ತು ಪರಧರ್ಮಗಳ ಅರ್ಥವನ್ನು ನೋಡೋಣ. ಈ ಶ್ಲೋಕದಲ್ಲಿ ಶ್ರೀಕೃಷ್ಣನು–ಸ್ವಧರ್ಮವನ್ನು ಬಿಡಬಾರದೆಂತಲೂ, ಸ್ವಧರ್ಮದಲ್ಲಿ ಮರಣ ಹೊಂದಿದರೆ ಶ್ರೇಯಸ್ಸೆಂತಲೂ, ಪರಧರ್ಮವು ಭಯಂಕರವಾದುದೆಂತಲೂ ಹೇಳುತ್ತಾನೆ ಮತ್ತು ಹದಿನೆಂಟನೆಯ ಅಧ್ಯಾಯದಲ್ಲಿ "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ" ಅಂದರೆ ಸರ್ವಧರ್ಮಗಳನ್ನು ತ್ಯಜಿಸಿ ನನ್ನೊಬ್ಬನನ್ನೇ ಶರಣು ಹೊಂದಿದರೆ ಅದರಿಂದ ಮೋಕ್ಷವುಂಟಾಗುತ್ತದೆ ಎಂದು ಹೇಳಿದ್ದಾನೆ ಇಲ್ಲಿ ಈ ಅಧ್ಯಾಯದಲ್ಲಿ ಸ್ವಧರ್ಮವನ್ನು ಬಿಡಬಾರದೆಂದು ಹೇಳಿ, ಕೊನೆಗೆ ಹದಿನೆಂಟನೆಯ ಅಧ್ಯಾಯದಲ್ಲಿ ಸರ್ವ ಧರ್ಮಗಳನ್ನು ಬಿಡಬೇಕೆಂದು ಹೇಳಿದ್ದರಿಂದ ಸರ್ವಧರ್ಮಗಳಲ್ಲಿ ಸ್ವಧರ್ಮವೂ ಸಹ ಅದರಲ್ಲಿಯೇ ಸೇರಿರುವುದೇ ? ಅಥವಾ ಸ್ವಧರ್ಮವೆಂಬುದು ಪ್ರತ್ಯೇಕವಾದುದೋ ? ಅಂದರೆ ಸ್ವಧರ್ಮವೆಂಬುದು ಪ್ರತ್ಯೇಕವಾದುದು. ಸ್ವಧರ್ಮವೆಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರಾದಿಗಳ ಧರ್ಮವಲ್ಲ ಸ್ವಧರ್ಮವೆಂದರೆ ಆತ್ಮಧರ್ಮ ಯಾಕೆಂದರೆ ಸ್ವ ಎಂಬ ಪದಕ್ಕೆ ತಾನು ಎಂದರ್ಥ ತಾನು ಎಂದರೆ ಆತ್ಮ, ಆತ್ಮ ಧರ್ಮವೇ ಸ್ವಧರ್ಮ ಪರವೆಂದರೆ ತನಗಿಂತ ಬೇರೆಯಾದವುಗಳು ದೇಹಾದಿಗಳೂ ತನಗಿಂತ ಬೇರೆಯಾದುದರಿಂದ ಅವು ಪರ, ಅವುಗಳ ಧರ್ಮಗಳು ಪರಧರ್ಮಗಳು ಇದೇ ಆಧ್ಯಾತ್ಮಿಕ ದೃಷ್ಟಿಯಿಂದ ಸ್ವಧರ್ಮ ಪರಧರ್ಮ ಪದಗಳಿಗೆ ಅರ್ಥ

ಪ್ರ: ಇನ್ನು ಆತ್ಮನ ಧರ್ಮಗಳು ಯಾವುವು ?

ಉತ್ತರ: ಆತ್ಮನ ಧರ್ಮಗಳೆಂದರೆ ಆತ್ಮನು ನಿಷ್ಕ್ರಿಯನೂ, ನಿರ್ಗುಣನೂ, ಸಚ್ಚಿದಾನಂದರೂಪನೂ ಆಗಿರುತ್ತಾನೆ ಇಂಥಾ ಆತ್ಮನೇ ನಾನೆಂದು ತಿಳಿದವನು ಅಂದರೆ ಆತ್ಮಧರ್ಮದಲ್ಲಿ ಇದ್ದವನು ಹೇಗೆ ಸತ್ತರೂ ಅವನು ಮುಕ್ತನೇ ಎಂಬುದು ಈ ಶ್ಲೋಕದ ತಾತ್ಪರ್ಯ ಇನ್ನು ಸರ್ವ ಧರ್ಮಗಳೆಂದರೆ ಜಾತಿ, ದೇಹ, ಇಂದ್ರಿಯ, ಪ್ರಾಣ, ಮನಸ್ಸು ಮತ್ತು ಬುದ್ಧ್ಯಾದಿಗಳ ಧರ್ಮಗಳನ್ನು ಪರಿತ್ಯಜಿಸಿ ಆತ್ಮನಾದ ನನ್ನನ್ನು ಅಂದರೆ ಸ್ವಧರ್ಮವನ್ನೇ ಶರಣು ಹೊಂದು

ಎಂದು ಶ್ರೀಕೃಷ್ಣನು ಹೇಳಿರುತ್ತಾನೆ ಅಂತು ಸ್ವಧರ್ಮವೆಂದರೆ ಆತ್ಮಧರ್ಮ, ಸರ್ವ ಧರ್ಮಗಳೆಂದರೆ ಅನಾತ್ಮಧರ್ಮ ಇಲ್ಲಿ ಅನಾತ್ಮ ಧರ್ಮವನ್ನು ಬಿಡು, ಆತ್ಮ ಧರ್ಮವನ್ನು ಹಿಡಿ – ಹೀಗೆ ಮಾಡಿದರೆ ಮೋಕ್ಷ ಪ್ರಾಪ್ತಿಯಾಗುತ್ತದೆ ಎಂಬುದು ಆ ಶ್ಲೋಕದಲ್ಲಿಯ ತಾತ್ಪರ್ಯವೆಂದು ತಿಳಿಯಬೇಕು

ಸಂಬಂಧ : ಮುಂದಿನ ಶ್ಲೋಕದಲ್ಲಿ ಮನುಷ್ಯನಿಗಾಗುವ ಅನರ್ಥಗಳಿಗೆಲ್ಲಾ ಕಾರಣವಾದುದು ಪ್ರತಿಪಾದಿಸಲ್ಪಡುತ್ತದೆ

ಅರ್ಜುನ ಉವಾಚ ·

**ಅಥ ಕೇನ ಪ್ರಯುಕ್ತೋಽಯಂ । ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ । ಬಲಾದಿವ ನಿಯೋಜಿತಃ ॥ ೩೬ ॥**

ತಾ . ಹೇ ಕೃಷ್ಣ, ಹಾಗಾದರೆ ಈ ಪುರುಷನು ತಾನು ಇಚ್ಛಿಸದಿದ್ದರೂ ಕೂಡ ಯಾವುದರಿಂದ ಪ್ರೇರಿತನಾಗಿ, ಬಲಾತ್ಕಾರದಿಂದ ನಿಯಂತ್ರಿತನಾಗಿ ಹಾಗೆ ಪಾಪವನ್ನು ಆಚರಿಸುತ್ತಾನೆ ?

## ವಿವರಣೆ

ಪ್ರಶ್ನೆ . " ವಾರ್ಷ್ಣೇಯ " ಪದದ ಅರ್ಥವೇನು ?

ಉತ್ತರ ಬ್ರಹ್ಮಜ್ಞಾನಿಗಳಲ್ಲಿ ಬ್ರಹ್ಮಾನಂದರೂಪ ಅಮೃತವನ್ನು ಸುರಿಸುವುದಕ್ಕೆ ವೃಷ್ಣಿ ಎನ್ನುತ್ತಾರೆ ಅಂದರೆ ಪರಮಾತ್ಮನನ್ನು ತನ್ನ ಆತ್ಮರೂಪದಿಂದ ತಿಳಿಯುವ ಸಮ್ಯಕ್ ಬೋಧೆಯೇ ವಾರ್ಷ್ಣೇಯ ಅರ್ಥಾತ್ ಪರಮಾತ್ಮ ಇಲ್ಲಿ ಪರಮಾತ್ಮನ ಸಂಬೋಧನೆಯೇ ವಾರ್ಷ್ಣೇಯ

ಪ್ರಮಾಣ ಬ್ರಹ್ಮವಿದಾಂ ಬ್ರಹ್ಮಾನಂದಾಮೃತಂ ವರ್ಷತೀತಿವೃಷ್ಣಿಃ ಸಮ್ಯಗ್ಬೋಧಸ್ತೇನಾವಗಮ್ಯತೆಇತಿವಾರ್ಷ್ಣೇಯಃ ಪರಮಾತ್ಮಶ್ರೀಭಗವಾನ್ ತಸ್ಯ ಸಂಬುದ್ಧಿರ್ಹೇ ವಾರ್ಷ್ಣೇಯ

ಪ್ರಶ್ನೆ : ಅಥ ಶಬ್ದದ ಹೇತುವೇನು ?

ಉತ್ತರ . ಅಥ ಶಬ್ದಃ ಪೃಥಂಕ್ಪ್ರಶ್ನಾರಂಭಾರ್ಥ – ಅಂದರೆ ಅಥ ಶಬ್ದವು ಪ್ರಥಕ್ ಪ್ರಶ್ನೆಯ ಆರಂಭಕ್ಕಾಗಿದೆ

ಪ್ರಶ್ನೆ : ಈ ಪ್ರಶ್ನೆಯನ್ನು ಮಾಡಿದ ಅರ್ಜುನನ ಭಾವವೇನು ?

ಉತ್ತರ : ಹಿಂದೆ ಎರಡನೆಯ ಅಧ್ಯಾಯದ ಅರವತ್ತನೆಯ ಶ್ಲೋಕದಲ್ಲಿ ಯತ್ನಮಾಡುವ ಬುದ್ಧಿವಂತ ಮನುಷ್ಯನ ಮನಸ್ಸನ್ನೂ ಸಹ ಇಂದ್ರಿಯಗಳು ಬಲಾತ್ಕಾರದಿಂದ ವಿಚಲಿತ ಮಾಡುತ್ತವೆ – ಎಂದು ಹೇಳಿದೆ. ವ್ಯವಹಾರದಲ್ಲಿಯೂ ಸಹ ಬುದ್ಧಿವಂತನು, ವಿವೇಕಶೀಲನಾದ ಮನುಷ್ಯನು ಪ್ರತ್ಯಕ್ಷದಲ್ಲಿಯೂ ಅನುಮಾನದಿಂದಲೂ ಪಾಪಗಳ ಕೆಟ್ಟ ಪರಿಣಾಮಗಳನ್ನು ವಿಚಾರ ದ್ವಾರಾ ಅವುಗಳಲ್ಲ ಪ್ರವೃತ್ತನಾಗುವುದು ಸರಿಯಲ್ಲವಲ್ಲವೆ ? ಆವನು ಇಚ್ಛಾಪೂರ್ವಕ ಪಾಪಕರ್ಮವನ್ನು ಮಾಡಲಾಗುವುದಿಲ್ಲ ಹಾಗಿದ್ದರೂ ಅವನಿಂದ ಬಲಾತ್ಕಾರದಿಂದ ರೋಗಿಗೆ ಇಚ್ಛೆಯಿಲ್ಲದಿದ್ದರೂ ಬಲಾತ್ಕಾರವಾಗಿ ಕುಪಥ್ಯ ಸೇವೆಯನ್ನು ಮಾಡಿದಂತೆ ಪಾಪಕರ್ಮವು ಸಂಭವಿಸುತ್ತದೆ ಆದುದರಿಂದ ಉಪರ್ಯುಕ್ತ ಪ್ರಶ್ನೆ ದ್ವಾರಾ ಅರ್ಜುನನು ಶ್ರೀಕೃಷ್ಣನಿಂದ – ಮನುಷ್ಯನನ್ನು ಬಲಾತ್ಕಾರದಿಂದ ಪಾಪದಲ್ಲಿ ಪ್ರವೃತ್ತಿ ಮಾಡುವವರಾರು ? ಅಂದರೆ ಸರ್ವ ಪ್ರೇರಕನಾದ ಪರಮಾತ್ಮನೇ ಪಾಪದಲ್ಲಿ ಪ್ರೇರೇಪಿಸುವನೆ ? ಮತ್ತು ಪ್ರಾರಬ್ಧಕ್ಕೆ ವಶನಾಗಿ ಅನಿವಾರ್ಯವಾಗಿ ಪಾಪವನ್ನು ಮಾಡಬೇಕಾಗುತ್ತದೆಯೇ ಎಂಬ ವಿಷಯವನ್ನು ನಿರ್ಣಯ ಮಾಡುವುದಕ್ಕಾಗಿ ಈ ಪ್ರಶ್ನೆಯನ್ನು ಮಾಡಿದ್ದಾನೆ. ಅಂದರೆ ಪಾಪ ಕರ್ಮಕ್ಕೆ ಕಾರಣರಾರು ? ಎಂಬುದೇ ಈ ಪ್ರಶ್ನೆಯ ಭಾವ.

ಸಿದ್ಧಾರ್ಥವೇನೆಂದರೆ – ಕೃಷ್ಣನೇ ಕೇಳು ಇನ್ನು ಈ ಮನುಷ್ಯನು ಯಾರಿಂದ ಪ್ರೇರಿತನಾಗಿ ತನಗೆ ಬೇಡವಾದರೂ ತನಗಿಂತ ಬಲಿಷ್ಠರಾದ ಜರಾ ಮೊದಲಾದವರಿಂದ ಅಪ್ಪಣೆಯನ್ನು ಹೊಂದಿ ನಡೆಯಿಸುವವನ ಹಾಗೆ ಪಾಪ ಕರ್ಮವನ್ನು ಮಾಡುತ್ತಾನೆ ?

ಸಂಬಂಧ. ಅರ್ಜುನನ ಈ ಪ್ರಶ್ನೆಗೆ ಮುಂದಿನ ಶ್ಲೋಕದಲ್ಲಿ ಭಗವಂತನು ಸಮಾಧಾನ ಹೇಳುತ್ತಾನೆ

ಶ್ರೀ ಭಗವಾನುವಾಚ :

**ಕಾಮ ಏಷ ಕ್ರೋಧ ಏಷ – ರಜೋಗುಣ ಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ । ವಿದ್ಧ್ಯೇನಮಿಹ ವೈರಿಣಮ್ ॥೩೭॥**

ತಾ. ಇದು ಕಾಮವು, ಇದು ಕ್ರೋಧವು, ಇದು ರಜೋಗುಣದಿಂದ ಹುಟ್ಟಿದ್ದು, ಇದು ಸರ್ವಗ್ರಾಸೆ, ಮಹಾ ಪಾಪ–ಇದನ್ನು ಇಲ್ಲಿ ಶತ್ರು ಎಂದು ತಿಳಿ.

## ವಿವರಣೆ

ಪ್ರಶ್ನೆ · "ಕಾಮಃ" ಮತ್ತು "ಕ್ರೋಧಃ" ಈ ಎರಡು ಪದಗಳೊಂದಿಗೆ ಎರಡು ಸಾರೆ "ಏಷಃ" ಪದದ ಪ್ರಯೋಗದ ಕಾರಣವೇನು ? ಹಾಗೂ "ರಜೋಗುಣ ಸಮುದ್ಭವಃ" ಎಂಬ ವಿಶೇಷಣದ ಸಂಬಂಧ ಇವುಗಳಲ್ಲಿ ಯಾವ ಪದಕ್ಕೆ ಸಂಬಂಧಪಟ್ಟಿರುತ್ತದೆ ?

ಉತ್ತರ : ಮೂವತ್ನಾಲ್ಕನೆಯ ಶ್ಲೋಕದಲ್ಲಿ ಪ್ರತ್ಯೇಕ ಇಂದ್ರಿಯಗಳ ವಿಷಯಗಳಲ್ಲಿ ಇರುವ ರಾಗ ಮತ್ತು ದ್ವೇಷವೇ ಈ ಮನುಷ್ಯನನ್ನು ಲೂಟಿಮಾಡುವ ಲೂಟಿಗಾರರು ಎಂದು ಹೇಳಿದ ಆ ರಾಗದ್ವೇಷ–ದ್ವೇಷಗಳೆರಡರ ಸ್ಥೂಲರೂಪವನ್ನು ಕುರಿತು ಇಲ್ಲಿ ಕಾಮ-ಕ್ರೋಧ ಎಂದು ಹೇಳಿರುವುದು ಇದನ್ನು ಸೂಚಿಸುವುದಕ್ಕಾಗಿಯೇ, ಹಾಗೂ ಈ ಎರಡರಲ್ಲಿಯೂ ಕಾಮವೇ ಪ್ರಧಾನವಾಗಿದೆ ಯಾತಕ್ಕೆಂದರೆ ಇದು ರಾಗದ ಸ್ಥೂಲರೂಪ. ಮತ್ತು ಇದರಿಂದಲೇ ಕ್ರೋಧವು ಉತ್ಪನ್ನವಾಗುತ್ತದೆ – ಎಂಬುವುದನ್ನು ಸಹ ಸೂಚಿಸುವುದಕ್ಕಾಗಿ "ಕಾಮಃ" ಮತ್ತು "ಕ್ರೋಧಃ" ಈ ಎರಡು ಪದಗಳೊಂದಿಗೆ "ಏಷ" ಪದವು ಪ್ರಯೋಗಿಸಲ್ಪಟ್ಟಿದೆ ಕಾಮದ ಉತ್ಪತ್ತಿಯು ರಾಗದಿಂದ ಆಗುತ್ತದೆ, ಈ ಕಾರಣದಿಂದ "ರಜೋಗುಣ ಸಮುದ್ಭವಃ" ಎಂಬ ವಿಶೇಷಣವು "ಕಾಮಃ" ಎಂಬ ಪದಕ್ಕೆ ಸಂಬಂಧಿಸಿರುವುದೆಂದು ತಿಳಿಯಬೇಕು

ಪ್ರಶ್ನೆ. ಒಂದು ವೇಳೆ "ಕಾಮ" ಮತ್ತು "ಕ್ರೋಧ" ಈ ಎರಡೂ ಮನುಷ್ಯನಿಗೆ ಶತ್ರುವಾಗಿದ್ದರೆ ಶ್ರೀ ಕೃಷ್ಣನು ಮೊದಲು ಈ ಎರಡರ ಹೆಸರನ್ನು ಹೇಳಿ ನಂತರ ಕಾಮ ಒಂದನ್ನೇ ಶತ್ರು ಎಂದು ತಿಳಿ ಎಂದು ಹೇಳಿದ ಕಾರಣವೇನು ?

ಉತ್ತರ . ಮೊದಲೇ ಕಾಮದಿಂದಲೇ ಕ್ರೋಧವು ಉತ್ಪತ್ತಿಯೆಂದು ಹೇಳಿದೆ ಅತಃ ಕಾಮವು ನಾಶವಾಗುತ್ತಲೇ ಕ್ರೋಧವೂ ಸಹ ನಾಶವಾಗುತ್ತದೆ ಎಂಬುದು ಸ್ಪಷ್ಟವಾಗಿದೆ ಇದರಿಂದ ಶ್ರೀ ಕೃಷ್ಣನು ಈ ಪ್ರಕರಣದಲ್ಲಿ ನಂತರ ಕೇವಲ "ಕಾಮ"ದ ಹೆಸರನ್ನೇ ತೆಗೆದುಕೊಂಡಿರುತ್ತಾನೆ ಆದರೆ ಪಾಪಕ್ಕೆ ಹೇತು ಕಾಮವೇ, ಕ್ರೋಧಕ್ಕೆ ಅದರ ಸಂಬಂಧವೇ ಇಲ್ಲವೆಂದು ಯಾರೂ ತಿಳಿಯಬಾರದು. ಇದನ್ನು ಸೂಚಿಸುವುದಕ್ಕಾಗಿ ಪ್ರಕರಣದ ಆರಂಭದಲ್ಲಿ ಕಾಮದೊಂದಿಗೆ ಕ್ರೋಧದ ಹೆಸರನ್ನೂ ಸಹ ತೆಗೆದುಕೊಂಡಿದೆ.

ಪ್ರಶ್ನೆ ಕಾಮದ ಉತ್ಪತ್ತಿಯು ರಜೋಗುಣದಿಂದಲೋ ಅಥವಾ ರಾಗದಿಂದಲೋ ?

ಉತ್ತರ ರಜೋಗುಣದಿಂದ ರಾಗದ ವೃದ್ಧಿಯಾಗುತ್ತದೆ ಮತ್ತು ರಾಗದಿಂದ ರಜೋಗುಣದ ವೃದ್ಧಿಯಾಗುತ್ತದೆ ಹೀಗಿರುವುದರಿಂದ ಈ ಎರಡಕ್ಕೂ ಒಂದೇ ಸ್ವರೂಪವೆಂದು ತಿಳಿಯಬೇಕು ಇದೇ ವಿಷಯವನ್ನು ಮುಂದೆ ಹದಿನಾಲ್ಕನೆಯ ಅಧ್ಯಾಯದ ಏಳನೆಯ ಶ್ಲೋಕದಲ್ಲಿ ನಿರೂಪಿಸಿದೆ ಆದುದರಿಂದ ಕಾಮದ ಉತ್ಪತ್ತಿಯಲ್ಲಿ ಎರಡೂ ಕಾರಣಗಳಿರುತ್ತವೆ

ಪ್ರಶ್ನೆ . ಕಾಮವನ್ನು ಕುರಿತು "ಮಹಾಶನಃ" ಅಂದರೆ ಬಹಳ ತಿನ್ನುವವನು ಎಂದು ಹೇಳಲು ಕಾರಣವೇನು ?

ಉತ್ತರ . ಈ ಕಾಮವು ಭೋಗಗಳನ್ನು ಭೋಗಿಸುತ್ತ ಯಾವಾಗಲೂ ತೃಪ್ತಿಯಾಗುವುದಿಲ್ಲವೇ ಇಲ್ಲ ಇದು ತುಪ್ಪ ಮತ್ತು ಕಟ್ಟಿಗೆಗಳನ್ನು ಹಾಕಿದಂತೆಲ್ಲ ಅಗ್ನಿಯು ಬೆಳೆಯುತ್ತಲೇ ಇರುವಂತೆ ಮನುಷ್ಯನು ಎಷ್ಟು ಅಧಿಕವಾಗಿ ಭೋಗಗಳನ್ನು ಭೋಗಿಸಿದರೂ ಅಷ್ಟೇ ಅವನ ಭೋಗದ ದಾಹವು ಬೆಳೆಯುತ್ತಲೇ ಇರುತ್ತದೆ ಆದುದರಿಂದ ಇದಕ್ಕೆ "ಮಹಾಶನಃ" ಅನ್ನದೆ ಮತ್ತೇನು ಅನ್ನಬೇಕು ! ಆದುದರಿಂದ ಭೋಗಗಳ ಪ್ರಲೋಭನೆಯನ್ನು ಕೊಟ್ಟು ನಾನು ಸಾಮ, ದಾನ, ದಂಡ ಮತ್ತು ಭೇದವೆಂಬ ನೀತಿಗಳಲ್ಲಿ ಸಾಮ, ದಾನ, ದಂಡವೆಂಬ ಮೂರು ಉಪಾಯಗಳಿಂದ ಕಾಮವೆಂಬ ವೈರಿಯನ್ನು ಜಯಿಸುವೆನೆಂಬ ಭಾವವನ್ನು ಬಿಟ್ಟುಬಿಡಬೇಕು. ಅದು ಭೇದೋಪಾಯದಿಂದಲೇ ಸಾಧ್ಯವೆಂಬುದನ್ನು ಮರೆಯಬಾರದು

ಸಾರಾಂಶ ಸರ್ವಾನರ್ಥಗಳಿಗೆ ಮೂಲ ಕಾರಣವಾದದ್ದು ಒಂದಿದೆ, ಅದೇ ಕಾಮ , ಈ ಕಾಮಕ್ಕೆ ಯಾವುದಾದರೂ ಅಡ್ಡಿಯಾದರೆ ಆಗಲೇ ಕ್ರೋಧವು ಉತ್ಪನ್ನವಾಗುತ್ತದೆ. ಅಂದರೆ ಕಾಮವೇ ಕ್ರೋಧರೂಪವಾಗಿ ಪರಿಣಮಿಸುತ್ತದೆ ಪ್ರಧಾನ ಶತ್ರುವಾದ ಈ ಕಾಮವನ್ನು ಮೊದಲು ಜಯಿಸಬೇಕು, ಆ ಮೇಲೆ ಸರ್ವವನ್ನು ಜಯಿಸಿದಂತೆ ಆಗುತ್ತದೆ ಶತ್ರುಗಳನ್ನು ಜಯಿಸುವುದಕ್ಕೆ ಧರ್ಮಶಾಸ್ತ್ರದಲ್ಲಿ ಸಾಮ, ದಾನ, ದಂಡ ಮತ್ತು ಭೇದಗಳೆಂಬ ಚತುರೋಪಾಯಗಳನ್ನು ಹೇಳಿದೆ ಅವುಗಳಲ್ಲಿ ಕಾಮವೆಂಬ ಶತ್ರುವನ್ನು ಯಾವ ಉಪಾಯದಿಂದ ಜಯಿಸಬೇಕು ? ಕಾಮವು ಮಹಾಪಾಪ ಅಂದರೆ

ಅತ್ಯುಗ್ರವಾದದ್ದು , ಆದುದರಿಂದ ಸಾಮೋಪಾಯವು ಕೆಲಸಕ್ಕೆ ಬರುವುದಿಲ್ಲ ಕಾಮಕ್ಕೆ ಆಶೆಯು ಅಷ್ಟಿಷ್ಟೆಂದು ಹೇಳಲಾಗುವುದಿಲ್ಲ ಅದು ಹಾಕಿದಂತೆಲ್ಲ ವೃದ್ಧಿಯಾಗುತ್ತದೆಯೇ ವಿನಹ ತಗ್ಗುವುದಿಲ್ಲ ಆದುದರಿಂದ ದಾನವೆಂಬ ಉಪಾಯವು ವ್ಯರ್ಥವೇ ಕಾಮವು ರಜೋಗುಣದಿಂದ ಉತ್ಪತ್ತಿಯಾಗಿರು ವುದರಿಂದ ಇದಕ್ಕೆ ಹೋರಾಟವೆಂದರೆ ಮಹಾ ಇಷ್ಟ ಆದುದರಿಂದ ದಂಡವೆಂಬ ಉಪಾಯವೂ ನಿರರ್ಥಕವೇ ಇನ್ನು ಉಳಿದದ್ದು ಭೇದೋಪಾಯ ಈ ಉಪಾಯದಿಂದ ಮಾತ್ರ ಕಾಮವೆಂಬ ಶತೃವನ್ನು ಗೆಲ್ಲಬಹುದು

ವಿಶ್ವಾಮಿತ್ರನು ಮಾಡುವ ಯಜ್ಞವನ್ನು ಮಾರೀಚಾದಿ ರಾಕ್ಷಸರು ಅನೇಕ ಸಾರಿ ವಿಘ್ನವನ್ನುಂಟುಮಾಡಿ ಪೂರ್ಣವಾಗದಂತೆ ಅಡ್ಡಿಯಾಗಿದ್ದರು ವಿಶ್ವಾಮಿತ್ರನು ರಾಕ್ಷಸರನ್ನು ಓಡಿಸಿ ತನ್ನ ಯಜ್ಞಕ್ಕೆ ಸಹಾಯ ಮಾಡುವುದ ಕ್ಕಾಗಿ ದಶರಥ ಮಹಾರಾಜನಲ್ಲಿಗೆ ಹೋಗಿ ಸಹಾಯಕ್ಕೆ ರಾಮಲಕ್ಷ್ಮಣರನ್ನು ಕಳುಹಿಸಬೇಕೆಂದು ಕೋರಲು ಪುತ್ರ ವಾತ್ಸಲ್ಯದಿಂದ ದಶರಥನು ಕಳುಹಿಸಲು ಒಪ್ಪಲಿಲ್ಲ ವಶಿಷ್ಠ ಮಹರ್ಷಿಗಳು ತಿಳಿಯ ಹೇಳಿದ ಮೇಲೆ ದಶರಥನು ಒಪ್ಪಿ ರಾಮ ಲಕ್ಷ್ಮಣರನ್ನು ಕಳುಹಿಸಿದನು ವಿಶ್ವಾಮಿತ್ರನು ತನ್ನ ಆಶ್ರಮಕ್ಕೆ ಸೇರು ವುದರೊಳಗಾಗಿಯೇ ಅವರಿಗೆ ಅಸ್ತ್ರ ಶಸ್ತ್ರವಿದ್ಯೆಯನ್ನು ಕಲಿಸಿ ಕರೆದುಕೊಂಡು ಹೋದನು ಆಶ್ರಮದ ಮುಂಭಾಗದಲ್ಲಿರುವಾಗಲೇ ಅವರಿಗೆ ಮಾರೀಚನ ತಾಯಿಯಾದ ತಾಟಕಿಯ ಭೇಟಿಯಾಯಿತು ಅವಳು ಈ ಹುಡುಗರ ರೂಪದಲ್ಲಿ ತೋರುವ ರಾಮ ಕೃಷ್ಣರನ್ನು ನೀವು ಯಾರು? ಏತಕ್ಕೆ ಬಂದಿರಿ ? ಎಂದು ಕೇಳಿ ದಳು ರಾಮನು ನಾವು ದಶರಥನ ಮಕ್ಕಳು ವಿಶ್ವಾಮಿತ್ರರು ನಮ್ಮ ಗುರುಗಳು ಅವರ ಯಜ್ಞಕ್ಕೆ ವಿಘ್ನವನ್ನುಂಟುಮಾಡುವ ರಾಕ್ಷಸರ ಬಾಧೆಯನ್ನು ಕಳೆ ಯಲು ಬಂದಿರುತ್ತೇವೆ – ಅಂದನು ತಾಟಕಿಯು ವಿಶ್ವಾಮಿತ್ರರು ನಿಮ್ಮ ಗುರುಗಳೇ ? ಅವರಿಗೆ ಸಹಾಯ ಮಾಡುವಿರಾ ? ಅವರ ಯಜ್ಞಕ್ಕೆ ವಿರೋಧ ಮಾಡುವ ರಾಕ್ಷಸರ ಬಾಧೆಯಿಂದ ತಪ್ಪಿಸಲಾರದ ಅಸಮರ್ಥರಾದ ಅವರು ನಿಮಗೇನು ಮಾಡಬಲ್ಲರು ? ಎಂದು ಕೇಳಿದಳು ರಾಮನು ನಮ್ಮ ಗುರುಗಳು ಸರ್ವಸಮರ್ಥರು,ಅವರಲ್ಲಿ ಎಲ್ಲಾ ಶಕ್ತಿಗಳಿವೆ ಅವರು ಅಸಮರ್ಥರಲ್ಲ. ಆದರೆ ಅವರು ತಮ್ಮ ಶಕ್ತಿಯನ್ನು ಯೋಗ್ಯವಾದ ಕೆಲಸಕ್ಕೆ ಉಪಯೋಗ ಮಾಡಿ ಕೊಳ್ಳುತ್ತಾರೆ ಅವರಲ್ಲಿರುವುದು ಆಧ್ಯಾತ್ಮಿಕ ಶಕ್ತಿ ಅದು ಪ್ರಪಂಚವನ್ನೇ

ಉದ್ಧಾರ ಮಾಡಬಲ್ಲದು. ರಾಕ್ಷಸರನ್ನು ಸಂಹಾರ ಮಾಡಲು ಆ ಮಹಾ ಶಕ್ತಿಯು ಯಾತಕ್ಕೆ ಬೇಕು ? ಅದಕ್ಕೆ ಕ್ಷತ್ರಿಯ ಶಕ್ತಿಯೇ ಸಾಕು ಆ ಕ್ಷಾತ್ರ ಶಕ್ತಿಯು ನನ್ನಲ್ಲಿ ಇರುವುದರಿಂದ ನನ್ನನ್ನು ಕರೆತಂದಿರುತ್ತಾರೆ – ಎಂದು ಹೇಳಲು ತಾಟಕಿಯು ಸಂತೋಷಪಟ್ಟು – ರಾಮ, ಆಧ್ಯಾತ್ಮಿಕ ದೃಷ್ಟಿಯಿಂದ ಮಾರೀಚನೆಂದರೆ ಕಾಮ ಕಾಮವು ಭ್ರಾಂತಿಯಿಂದಲೇ ಉಂಟಾಗುತ್ತದೆ ನೋಡಲು ಕಪ್ಪೆಚಿಪ್ಪನ್ನು ಕಪ್ಪೆಚಿಪ್ಪೆಂದು ತಿಳಿಯದ ಭ್ರಾಂತಿಯಿಂದ ಬೆಳ್ಳಿಯು ಉಂಟಾಗುತ್ತದೆ ಆ ಬೆಳ್ಳಿಯಲ್ಲಿ ಕಾಮವುಂಟಾಗುವುದು ಸಹಜವಾಗಿದೆ ಅಂದ ಮೇಲೆ ಕಾಮದ ಉತ್ಪತ್ತಿಯು ಭ್ರಾಂತಿಯಿಂದ ಭ್ರಾಂತಿ ನಾಶವಾಗದೆ ಕಾಮವು ನಾಶವಾಗಲಾರದು. ನಾನು ಭ್ರಾಂತಿಯೆಂಬ ತಾಯಿ. ಮಾರೀಚನು ಕಾಮವೆಂಬ ನನ್ನ ಮಗನು ಮೊದಲು ನನ್ನನ್ನು ಸಂಹರಿಸು ಕಾಮ ಸಂಹಾರಕ್ಕೆ ಭೇದೋಪಾಯವೇ ಬೇಕು. ಹೇಗೆಂದರೆ –

"ನಾಹಂ ಕಾಮ ನಮೇ ಕಾಮ ಇತಿ ಕಾಮೋವಿಜಯತೆ" ಅಂದರೆ ನಾನು ಕಾಮವಲ್ಲ, ಯಾಕೆಂದರೆ ಅದು ನನಗೆ ತೋರುತ್ತದೆ ಅದು ತನ್ನದೂ ಅಲ್ಲ, ಅದು ಅಂತಃಕರಣ ಧರ್ಮ ಎಂದು – ಈ ರೀತಿ ಕಾಮಕ್ಕಿಂತ ತಾನು ಬೇರೆಯಾಗಿದ್ದು ಸಾಕ್ಷಿಯಾಗಿ ನೋಡುತ್ತ ಇರುವುದೇ ಕಾಮ ವಿಜಯಕ್ಕೆ ಯುಕ್ತಿಯೆಂದು ತಿಳಿಯಬೇಕು

ಪ್ರಶ್ನೆ · ಕಾಮವನ್ನು ಕುರಿತು "ಮಹಾ ಪಾಪ್ಮ" ಅಂದರೆ ಅದು ಬಹಳ ಪಾಪಿಯೆಂದು ಹೇಳಲು ಕಾರಣವೇನು ?

ಉತ್ತರ . ಹೀಗೆ ಹೇಳುವುದರಿಂದ ಸರ್ವ ಅನರ್ಥಗಳ ಮೂಲ ಕಾರಣವೇ ಕಾಮ ಮನುಷ್ಯನನ್ನು ಇಚ್ಛೆ ಇಲ್ಲದೆ ಪಾಪದಲ್ಲಿ ಪ್ರವೃತ್ತಿಯನ್ನು ಉಂಟು ಮಾಡುವುದೇ ಕಾಮ ಇದಕ್ಕೆ ಕಾರಣವು ಪ್ರಾರಬ್ಧವೂ ಅಲ್ಲ, ಈಶ್ವರನೂ ಅಲ್ಲ ಕಾಮವೇ ಮನುಷ್ಯನನ್ನು ಅನೇಕ ಪ್ರಕಾರದ ಭೋಗಗಳಲ್ಲಿ ಆಸಕ್ತಿಯನ್ನುಂಟುಮಾಡಿ ಅವನನ್ನು ಬಲಾತ್ಕಾರದಿಂದ ಪಾಪಕಾರ್ಯಗಳಲ್ಲಿ ಪ್ರವೃತ್ತನನ್ನಾಗಿ ಮಾಡುತ್ತದೆ ಈ ಕಾರಣದಿಂದ ಕಾಮವು ಮಹಾ ಪಾಪಯೆಂದು ಹೇಳಲಾಗಿದೆ

ಪ್ರಶ್ನೆ "ಇದನ್ನು ಈ ವಿಷಯದಲ್ಲಿ ನೀನು ವೈರಿಯೆಂದು ತಿಳಿ" ಅಂದರೇನು ?

ಉತ್ತರ ನಮ್ಮನ್ನು ಜುಲುಮೆಯಿಂದ ಪರಿಣಾಮದಲ್ಲಿ ಮಹಾ ದುಃಖದಾಯಕವೂ, ಮೃತ್ಯುದಾಯಕವೂ ಆದ ಸ್ಥಿತಿಗೆ ಎಳೆದೊಯ್ಯುವವರು ಶತ್ರುವಲ್ಲವೆ ಮಿತ್ರರಾಗುತ್ತಾರೆಯೆ! ಬುದ್ಧಿವಂತನಾದವನು ಯಥಾ ಸಂಭವ ಶೀಘ್ರದಲ್ಲಿಯೇ ಅಂಥಾ ಶತ್ರುವನ್ನು ನಾಶಮಾಡಿ ತನ್ನ ದಾರಿಯನ್ನು ಸುಗಮವನ್ನಾಗಿ ಮಾಡಿಕೊಳ್ಳಬೇಕು ಈ ಪಾಪಿಯಾದ ಕಾಮವು ಮನುಷ್ಯನನ್ನು ಅವನು ಇಚ್ಛಿಸದಿದ್ದರೂ ಜುಲುಮೆಯಿಂದ ಪಾಪಕರ್ಮಗಳಲ್ಲಿ ತೊಡಗಿಸಿ ಅವನನ್ನು ಜನನ–ಮರಣರೂಪ ಮತ್ತು ನರಕ–ಭೋಗರೂಪ ಮಹಾ ದುಃಖಗಳಲ್ಲಿ ಭಾಗಿಯನ್ನಾಗಿ ಮಾಡುತ್ತದೆ ಅತಃ ಶ್ರೇಯೋಮಾರ್ಗದಲ್ಲಿ ಇದನ್ನೇ ತನ್ನ ಮಹಾಶಬ್ದವೆಂದು ತಿಳಿಯಬೇಕು ಈಶ್ವರನಾದರೋ ಸರ್ವ ಪ್ರಾಣಿಗಳ ಸುಹೃದಯನೂ ಪರಮದಯಾಳುವೂ ಆದುದರಿಂದ ಅವನು ಯಾರನ್ನೂ ಪಾಪ ಕರ್ಮದಲ್ಲಿ ಪ್ರವೃತ್ತನನ್ನಾಗಿ ಮಾಡಲಾರನು ಮತ್ತು ಪ್ರಾರಬ್ಧವಾದರೋ ಹಿಂದೆ ಮಾಡಿದ ಕರ್ಮಗಳ ಭೋಗ ಸ್ವರೂಪವಾಗಿದೆ ಅದು ಭೋಗ ಕೊಡುವುದೇ ವಿನಹ ಯಾರನ್ನೂ ಪಾಪದಲ್ಲಿ ಪ್ರವೃತ್ತಿ ಮಾಡಲಾರದು. ಈ ಎಲ್ಲಾ ಕಾರಣಗಳಿಂದ ನೋಡಿದರೆ ಪಾಪ ಕರ್ಮಗಳಲ್ಲಿ ಪ್ರವೃತ್ತಮಾಡುವುದು ಪಾಪಿಯಾದ “ಕಾಮ”ವೇ

ವಿಶೇಷಾರ್ಥವೆಂದರೆ, ಸರ್ವ ಅನರ್ಥಗಳಿಗೆ ಕಾರಣವಾಗಿ ಲೋಕಕ್ಕೆಲ್ಲ ಶತ್ರುವಾಗಿರುವ ಅದು ಯಾವುದೆಂದರೆ ರಜೋಗುಣವೇ. ಉತ್ಪತ್ತಿ ಸ್ಥಾನವಾಗಿರುವ ಅಥವಾ ರಜೋಗುಣದಿಂದ ಹುಟ್ಟಿರುವ ಈ ಕಾಮ ಮನುಷ್ಯನಿಗೆ ಬಯಕೆಯುಂಟಾಗುತ್ತಲೇ ಅದು ತನ್ನ ಚಟವನ್ನು ತೀರಿಸಿಕೊಳ್ಳುವುದಕ್ಕಾಗಿ ಮನುಷ್ಯನನ್ನು ರಜೋಗುಣದ ಕಾರ್ಯವಾದ ದುಡಿತದಲ್ಲಿ ತೊಡಗಿಸುತ್ತದೆ, ದುಡಿತದಿಂದ ದುಃಖವಾಗುವುದೆಂಬ ಮಾತು ಎಲ್ಲರಿಗೂ ಗೊತ್ತು ಇದೇ ಸಿಟ್ಟು, ಬಯಕೆ ತೀರುವುದಕ್ಕೆ ಏನಾದರೂ ಅಡಚಣೆಯುಂಟಾದರೆ ಆ ಬಯಕೆಯೇ ಸಿಟ್ಟಿನ ರೂಪದಲ್ಲಿ ಕಾಣುತ್ತದೆ ಈ ಕಾಮವು ಬಹಳ ಕೆಟ್ಟದ್ದು ಏಕೆಂದರೆ ಇದು ಎಷ್ಟು ಹೊಟ್ಟೆಗೆ ಹಾಕಿದರೂ ನುಂಗಿ ನೀರು ಕುಡಿದು ಇನ್ನೂ ಬೇಕೆಂದು ಅಬ್ಬರಿಸುತ್ತದೆ ಅಗ್ನಿಗೆ ತುಪ್ಪವನ್ನು ಎರೆದಷ್ಟೂ ಅದು ಮತ್ತಷ್ಟು ಬೇಕೆಂದು ನಾಲಿಗೆಯನ್ನು ಮುಂದಕ್ಕೆ ಚಾಚುವಂತೆ ಮನುಷ್ಯನಿಗೆ ಎಷ್ಟು ಭೋಗ ಪದಾರ್ಥಗಳು ದೊರಕಿದರೂ ಸಾಲದೆ ಇನ್ನೂ ಬೇಕೆಂದು ಹುಡುಕಾ

ಡುತ್ತದೆ. ಇಷ್ಟಲ್ಲದೆ ಈ ಕಾಮವು ಮಹಾಪಾಪಿ. ಮನುಷ್ಯನನ್ನು ನಿರ್ದಯ ದಿಂದ ಪಾಪದ ಕಡೆಗೆ ಸೆಳೆಯುತ್ತಿರುವುದು ಆದ್ದರಿಂದ ಈ ಲೋಕದಲ್ಲಿ ಈ ಕಾಮವನ್ನು ಶತ್ರುವೆಂದು ತಿಳಿ

ಸಂಬಂಧ ಮೇಲಿನ ಶ್ಲೋಕದಲ್ಲಿ ಸರ್ವಾನರ್ಥಗಳ ಮೂಲ ಕಾರಣ ಕಾಮವೆಂದು ಹೇಳಿದ್ದಾಗಿದೆ ಮುಂದಿನ ಶ್ಲೋಕದಲ್ಲಿ ಕಾಮವು ಮನುಷ್ಯ ನನ್ನು ಹೇಗೆ ಪ್ರವೃತ್ತನನ್ನಾಗಿ ಮಾಡುತ್ತದೆ ಎಂಬ ವಿಷಯವು ಪ್ರತಿಪಾದಿಸ ಲ್ಪಡುತ್ತದೆ.

**ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋಗರ್ಭಸ್ತಥಾ ತೇನೇದಮಾವೃತಮ್ ॥ ೩೮ ॥**

ಹೊಗೆಯಿಂದ ಅಗ್ನಿಯೂ, ಕೊಳೆಯಿಂದ ಕನ್ನಡಿಯೂ, ಜರಾಯು ಎಂಬ ಪೊರೆಯಿಂದ ಗರ್ಭವೂ ಮುಚ್ಚಿರುವಂತೆ ಕಾಮದಿಂದ ಜ್ಞಾನವು ಮುಚ್ಚ ಲ್ಪಟ್ಟಿದೆ.

## ವಿವರಣೆ

ಪ್ರಶ್ನೆ ಹೊಗೆ, ಮಲ ಮತ್ತು ಜರಾ – ಈ ಮೂರರ ದೃಷ್ಟಾಂತದಿಂದ ಕಾಮದಿಂದ ಜ್ಞಾನವು ಆವರಿಸಲ್ಪಟ್ಟಿರುವುದೆಂದು ಹೇಳಿದ ಕಾರಣವೇನು ?

ಉತ್ತರ : ಈ ಕಾಮವೇ ಮಲ, ವಿಕ್ಷೇಪ ಮತ್ತು ಆವರಣವೆಂಬ ಮೂರು ದೋಷಗಳ ರೂಪದಲ್ಲಿ ಪರಿಣಿತವಾಗಿ ಮನುಷ್ಯನ ಜ್ಞಾನವನ್ನು ಆಚ್ಛಾದನೆ ಮಾಡುತ್ತದೆ ಎಂಬುವ ವಿಷಯವನ್ನು ಸ್ಪಷ್ಟಪಡಿಸಿದೆ ಇಲ್ಲಿ 'ಹೊಗೆ'ಯ ಸ್ಥಾನದಲ್ಲಿ 'ವಿಕ್ಷೇಪ'ವನ್ನು ತಿಳಿಯಬೇಕು ಹೊಗೆಯು ಚಂಚ ಲವಾಗಿದ್ದು ಅಗ್ನಿಯನ್ನು ಆಚ್ಛಾದಿಸುತ್ತದೆ ಅದರಂತೆ ವಿಕ್ಷೇಪವು ತಾನು ಚಂಚಲವಾಗಿದ್ದು ಜ್ಞಾನವನ್ನು ಆಚ್ಛಾದಿಸುತ್ತದೆ. ಏಕಾಗ್ರತೆಯಿಲ್ಲದ ಅಂತಃ ಕರಣದಲ್ಲಿ ಜ್ಞಾನಶಕ್ತಿಯು ಪ್ರಕಾಶಿತವಾಗಲಾರದು ಅದು ಅಣಗಿರುತ್ತದೆ ಇನ್ನು ಮಲದ ಸ್ಥಾನದಲ್ಲಿ ಅಂತಃಕರಣದ ಮಲದೋಷವನ್ನು ಗ್ರಹಿಸಬೇಕು ಕನ್ನಡಿಯ ಮೇಲೆ ಕೊಳೆ ಇದ್ದರೆ ಅದರಲ್ಲಿ ಪ್ರತಿಬಿಂಬವು ಬೀಳಲಾರದು. ಇದರಂತೆ ಪಾಪಗಳಿಂದ ಅಂತಃಕರಣವು ಅತ್ಯಂತ ಮಲಿನವಾದರೆ ಅದರಲ್ಲಿ ವಸ್ತುವಿನ ಅಥವಾ ಕರ್ತವ್ಯದ ಯಥಾರ್ಥ ಜ್ಞಾನವಾಗಲಾರದು ಇದರಿಂದ ಮನುಷ್ಯನು ಜ್ಞಾನದ ಇಲ್ಲವೆ ಕರ್ತವ್ಯದ ಯಥಾರ್ಥ ವಿವೇಚನೆಯನ್ನು

ಮಾಡಲಾರದೆ ಹೋಗುತ್ತಾನೆ ಮತ್ತು ಜರೆಯ ಸ್ಥಾನದಲ್ಲಿ "ಆವರಣ"ವನ್ನು ಗ್ರಹಿಸಬೇಕು. ಜರಾಯುವಿನಿಂದ ಗರ್ಭದ ಅಂಶವೂ ಸಹ ತೋರದೆ ಪೂರ್ಣವಾಗಿ ಮುಚ್ಚಿರುವಂತೆ ಜ್ಞಾನವು ಆವರಣದಿಂದ ಪೂರ್ಣವಾಗಿ ಮುಚ್ಚಲ್ಪಡುತ್ತದೆ ಅಂತಃಕರಣವು ಅಜ್ಞಾನದಿಂದ ಮೋಹಿತವಾದ ಮನುಷ್ಯನು ನಿದ್ರಾ ಆಲಸ್ಯಾದಿಗಳಲ್ಲಿ ಸಿಕ್ಕು ಯಾವ ಸಮೂನೆಯ ವಿಚಾರಮಾಡಲೂ ಅಸಮರ್ಥನಾಗುತ್ತಾನೆ.

ಈ ಕಾಮವೇ ಮನುಷ್ಯನ ಅಂತಃಕರಣದಲ್ಲಿ ಅನೇಕ ಪ್ರಕಾರದ ಭೋಗಗಳ ತೃಷ್ಣೆಯನ್ನು ವೃದ್ಧಿಮಾಡಿ ವಿಕ್ಷೇಪವನ್ನುಂಟುಮಾಡುತ್ತದೆ. ಇದೇ ಮನುಷ್ಯನಿಂದ ಅನೇಕ ಪ್ರಕಾರದ ಪಾಪಗಳನ್ನು ಮಾಡಿಸುತ್ತದೆ ಇಷ್ಟೇ ಅಲ್ಲದೆ ಮಲದೋಷವನ್ನೂ ಸಹ ವೃದ್ಧಿ ಮಾಡುತ್ತದೆ ಮತ್ತು ಇದೇ ನಿದ್ರಾ, ಆಲಸ್ಯಾ ಮತ್ತು ಅಕರ್ಮಣ್ಯದಲ್ಲಿ ಸುಖಬುದ್ಧಿಯನ್ನುಂಟುಮಾಡಿ ಮನುಷ್ಯನನ್ನು ಪೂರ್ಣವಾಗಿ ವಿವೇಕಹೀನನನ್ನಾಗಿ ಮಾಡುತ್ತದೆ. ಈ ಕಾರಣದಿಂದಲೇ ಕಾಮವು ಮೂರೂ ಪ್ರಕಾರದಿಂದ ಜ್ಞಾನವನ್ನು ಆಚ್ಛಾದಿಸುತ್ತದೆ ಎಂದು ಹೇಳಿದೆ.

ಪ್ರಶ್ನೆ . ಶ್ಲೋಕದಲ್ಲಿರುವ 'ತೇನ' ಪದಕ್ಕೆ ಕಾಮವೆಂತಲೂ ಮತ್ತು 'ಇದಮ್' ಪದಕ್ಕೆ ಜ್ಞಾನವೆಂತಲೂ ಅರ್ಥಮಾಡಲು ಆಧಾರವೇನು ?

ಉತ್ತರ ಇದಕ್ಕಿಂತ ಪೂರ್ವ ಶ್ಲೋಕದಲ್ಲಿ ಕಾಮವನ್ನು ವೈರಿಯೆಂದು ತಿಳಿಯಲು ಹೇಳಿದೆ. ಮತ್ತು ಮುಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು ತಾನೇ ಕಾಮದಿಂದ ಜ್ಞಾನವು ಆವರಿಸಿದೆ ಎಂದು ಹೇಳಿದ್ದಾನೆ ಇದರಿಂದ ಈ ಶ್ಲೋಕದಲ್ಲಿಯ 'ತೇನ' ಎಂಬ ಸರ್ವನಾಮವು 'ಕಾಮ'ದ ಮತ್ತು 'ಇದಮ್' ಎಂಬ ಸರ್ವನಾಮವು 'ಜ್ಞಾನ'ವಾಚಕವೆಂದು ಸ್ಪಷ್ಟವಾಗುತ್ತದೆ ಪದಗಳಿಗೆ ಈ ರೀತಿ ಅರ್ಥಮಾಡಲು ಇವೇ ಆಧಾರ

ನೆನಪಿನಲ್ಲಿಟ್ಟುಕೊಳ್ಳಬೇಕಾದ ವಿಷಯ . ಹೇಗೆ ಬೆಳಕು ಕೊಡುವ ಸ್ವಭಾವದ ಅಗ್ನಿಯು ತನ್ನಿಂದ ಹುಟ್ಟಿದ ಕತ್ತಲೆಯ ರೂಪವಾದ ಹೊಗೆಯಿಂದ ಆವರಿಸಲ್ಪಟ್ಟಿರುವುದೋ ಮತ್ತು ಅಷ್ಟೇ ಏಕೆ, ಇನ್ನು ದಟ್ಟವಾಗಿ ಕನ್ನಡಿಯು ಧೂಳಿಯಿಂದ ಮುಚ್ಚಿಕೊಂಡಿರುವುದೋ, ಇನ್ನೂ ಚೆನ್ನಾಗಿ ನೋಡಿದರೆ ಹೇಗೆ ಹೊಟ್ಟೆಯೊಳಗಿರುವ ಗರ್ಭವು ಜರಾಯು ಎಂಬ ಚರ್ಮದ ಚೀಲದಿಂದ ಮುಚ್ಚಿ

ಕೊಂಡಿರುವುದೋ ಹಾಗೆ ಈ ಕಾಮದಿಂದ ಇದು ಹೆಚ್ಚು ಹೆಚ್ಚಾಗಿ ದಟ್ಟವಾಗಿ ಮುಚ್ಚಿಕೊಂಡಿರುವುದು

ಸಂಬಂಧ. ಕಾಮವು ಏನನ್ನು ಮುಚ್ಚಿರುತ್ತದೆ ಎಂಬ ವಿಷಯವು ಮುಂದಿನ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುತ್ತದೆ.

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥ ೩೯ ॥**

ತಾತ್ಪರ್ಯ ಎಲೈ ಅರ್ಜುನಾ, ಜ್ಞಾನಿಗೆ ನಿತ್ಯ ವೈರಿಯಾದ, ತುಂಬಲು ಕಷ್ಟವಾದ, ತೃಪ್ತಿಪಡಿಸಲಾಗದ ಈ ಕಾಮದಿಂದ ಜ್ಞಾನವು ಮುಚ್ಚಲ್ಪಟ್ಟಿದೆ.

## ವಿವರಣೆ

ಪ್ರಶ್ನೆ "ಅನಲೇನ" ಮತ್ತು "ದುಷ್ಪೂರೇಣ" ಎಂಬ ವಿಶೇಷಣಗಳ ಅಭಿಪ್ರಾಯವೇನು ?

ಉತ್ತರ "ಸಾಕು, ಮತ್ತು ಏನೂ ಬೇಕಾಗಿಲ್ಲ" ಎಂಬ ತೃಪ್ತಿಯ ಭಾವದ ವಾಚಕವೇ "ಅಲಮ್" ಎಂಬ ಅವ್ಯಯ ಪದ ಈ ಭಾವದ ಅಭಾವವಿದ್ದರೆ ಅದಕ್ಕೆ 'ಅನಲ' ಎನ್ನುತ್ತಾರೆ ಅಗ್ನಿಯಲ್ಲಿ ಎಷ್ಟು ಘೃತವನ್ನು ಮತ್ತು ಕಟ್ಟಿಗೆಗಳನ್ನು ಹಾಕಿದರೂ ಅದಕ್ಕೆ ತೃಪ್ತಿಯಾಗದೆ ಮತ್ತೆ ಮತ್ತೆ ಬೇಕೆನ್ನುತ್ತದೆ ಆದುದರಿಂದ ಅಗ್ನಿಯನ್ನು 'ಅನಲ' ಎನ್ನುತ್ತಾರೆ ಮತ್ತು ಯಾವ ವಿಷಯದಿಂದಲೂ ತುಂಬದಿದ್ದರೆ ಅದಕ್ಕೆ "ದುಷ್ಪೂರ" ಎನ್ನುತ್ತಾರೆ. ಅತಃ ಉಪಯುರ್ಕ್ತ ವಿಶೇಷಣಗಳನ್ನು ಪ್ರಯೋಗ ಮಾಡಿ ಈ "ಕಾಮ"ವು ಸಹ ಅಗ್ನಿಯಂತೆ 'ಅನಿಲ' ಮತ್ತು 'ದುಷ್ಪೂರ' ವೆಂಬುವ ಭಾವವನ್ನು ಪ್ರಕಟಮಾಡಿದೆ ಮನುಷ್ಯನು ವಿಷಯಗಳನ್ನು ಭೋಗಿಸುತ್ತಾ ಹೋದಂತೆಲ್ಲಾ ಅಗ್ನಿಯಂತೆ ಅವನ ಕಾಮವೂ ಬೆಳೆಯುತ್ತಲೇ ಇರುತ್ತದೆ. ಅವನಿಗೆ ತೃಪ್ತಿಯೇ ಇರುವುದಿಲ್ಲ ಯಯಾತಿ ಮಹಾರಾಜನು ಅನೇಕ ಭೋಗಗಳನ್ನು ಭೋಗಿಸಿದ ನಂತರ ಅಂತ್ಯದಲ್ಲಿ ಹೇಳಿದ್ದು ಹೀಗೆ :—

**ನಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।**
**ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥**—ಭಾಗವತ

"ವಿಷಯಗಳ ಉಪಭೋಗದಿಂದ 'ಕಾಮ' ವು ಎಂದೂ ಶಾಂತಿಯಾಗುವುದಿಲ್ಲ, ಅಲ್ಲದೆ ತುಪ್ಪವನ್ನು ಹಾಕಿದ ಅಗ್ನಿಯಂತೆ ಮತ್ತೂ ಅಧಿಕವಾಗಿ ಬೆಳೆಯುತ್ತಿರುತ್ತದೆ"

ಪ್ರಶ್ನೆ . ಇಲ್ಲಿ "ಜ್ಞಾನಿನಃ" ಎಂಬ ಪದವು ಯಾವ ಜ್ಞಾನಿಯ ವಾಚಕವಾಗಿದೆ? ಮತ್ತು ಕಾಮವನ್ನು ಅವನ "ನಿತ್ಯವೈರಿ" ಎಂದು ಹೇಳುವ ಕಾರಣವೇನು?

ಉತ್ತರ : ಇಲ್ಲಿ "ಜ್ಞಾನಿನಃ" ಪದವು ಯಥಾರ್ಥ ಜ್ಞಾನದ ಪ್ರಾಪ್ತಿಗಾಗಿ ಸಾಧನೆ ಮಾಡುವ ಸಾಧಕರ ವಾಚಕವಾಗಿದೆ. ಈ ಕಾಮರೂಪವೆಂಬ ಶತೃ ಆ ಸಾಧಕರ ಅಂತಃಕರಣದಲ್ಲಿ ವಿವೇಕ, ವೈರಾಗ್ಯ ಮತ್ತು ನಿಷ್ಕಾಮ ಭಾವವನ್ನು ಸ್ಥಿರವಾಗುವಂತೆ ಮಾಡದೆ ಅವುಗಳನ್ನು ಸಾಧಿಸುವುದರಲ್ಲಿ ಅಟಂಕವನ್ನು ಉಂಟುಮಾಡುತ್ತದೆ ಈ ಕಾರಣದಿಂದ ಕಾಮವನ್ನು ಜ್ಞಾನಿಗಳ ನಿತ್ಯವೈರಿಯೆಂದು ಹೇಳಲಾಗಿದೆ ವಾಸ್ತವದಲ್ಲಿ ಈ ಕಾಮವು ಎಲ್ಲರನ್ನು ಅಧೋಗತಿಗೆ ನೆಳೆಯುವುದರಿಂದ ಎಲ್ಲರಿಗೂ ವೈರಿಯೆ ಪರಂತು ಅವಿವೇಕಿಯಾದ ಮನುಷ್ಯನು ವಿಷಯಗಳನ್ನು ಭೋಗಿಸುವಾಗ ಭೋಗಗಳಲ್ಲಿ ಸುಖಬುದ್ಧಿಯಿರುವುದರಿಂದ ಭ್ರಮೆಯಿಂದ ಕಾಮವನ್ನು ಮಿತ್ರನೆಂದು ತಿಳಿಯುತ್ತಾನೆ ಆದರೆ ತತ್ವವನ್ನು ತಿಳಿದಿರುವ ವಿವೇಕಿಗಳಿಗೆ ಇದು ಪ್ರತ್ಯಕ್ಷವಾಗಿ ಹಾನಿಕಾರಕವಾಗಿದೆ. ಆದುದರಿಂದ ಇದನ್ನು ಅವಿವೇಕಿಗಳ ನಿತ್ಯವೈರಿಯೆಂದು ಹೇಳದೆ ಜ್ಞಾನಿಗಳ ನಿತ್ಯವೈರಿಯೆಂದು ಹೇಳಲಾಗಿದೆ

ಪ್ರಶ್ನೆ : ಇಲ್ಲಿಯ "ಕಾಮರೂಪೇಣ" ಪದವು ಯಾವ ಕಾಮರೂಪ ಕುರಿತು ಬೋಧಿಸುತ್ತದೆ?

ಉತ್ತರ : ಇಲ್ಲಿ ಯಾವ ಕಾಮವನ್ನು ದುರ್ಗುಣಗಳ ಶ್ರೇಣಿಗಳಲ್ಲಿ ಸೇರಿಸಿಟ್ಟದೆಯೋ ಮತ್ತು ಗೀತೆಯಲ್ಲಿ ಅನೇಕ ಸ್ಥಾನದಲ್ಲಿ ಯಾವ ಕಾಮವನ್ನು ತ್ಯಾಗಮಾಡಲು ಹೇಳಿದೆಯೋ, ಹದಿನಾರನೆಯ ಅಧ್ಯಾಯದಲ್ಲಿ ಯಾವುದಕ್ಕೆ ನರಕದ ದ್ವಾರವೆಂದು ಹೇಳಿದೆಯೋ ಆ ಸಂಸಾರ ಸಂಬಂಧ ವಿಷಯಗಳನ್ನು,

ಬೇಡುವ ಬೇಡಿಕೆಯ ರೂಪದಲ್ಲಿರುವ ಆ ಕಾಮವನ್ನು ಇಲ್ಲಿ "ಕಾಮ" ಎಂದು ಹೇಳಿದೆ ಭಗವತ್ ಪ್ರಾಪ್ತಿಗಾಗಿ, ಭಗವದ್ಭಜನೆ ಇತ್ಯಾದಿಗಳನ್ನು ಮಾಡುವ ಮತ್ತು ಸಾತ್ವಿಕ ಕರ್ಮಗಳನ್ನು ಮಾಡುವ ಶುಭ ಇಚ್ಛೆಯನ್ನು ಇಲ್ಲಿ ಕಾಮವೆಂದು ಹೇಳಿಲ್ಲ ಈ ಇಚ್ಛೆಯು ಮನುಷ್ಯನ ಶ್ರೇಯಸ್ಸಿಗೆ ಸಾಧಕವಾಗುತ್ತದೆ ಈ ವಿಷಯ ಭೋಗರೂಪ ಕಾಮನೆಯನ್ನು ನಾಶಮಾಡುವ ಸದಿಚ್ಛೆಯು ಸಾಧಕನಿಗೆ ಎಂದೂ ಶತೃವಾಗಲಾರದು ಈ ಕಾರಣದಿಂದ ಗೀತೆಯಲ್ಲಿ "ಕಾಮ" ಎಂಬ ಶಬ್ದದ ಅರ್ಥವನ್ನು ಸಂಸಾರದ ಇಷ್ಟಾನಿಷ್ಟ ಭೋಗಗಳ ಸಂಯೋಗದ ಬಯಕೆ ಅಥವಾ ಭೋಗ್ಯ ಪದಾರ್ಥವೆಂದೇ ಗ್ರಹಿಸಿದೆ. ಈ ಪ್ರಕಾರ ಮೂವತ್ತನಾಲ್ಕನೆಯ ಶ್ಲೋಕದಲ್ಲಿ ಮತ್ತು ಕೆಲವು ಕಡೆ ಎಲ್ಲಿ 'ರಾಗ' ಮತ್ತು 'ಸಂಗ' ಎಂಬ ಶಬ್ದಗಳು ಬಂದಿರುವುವೋ ಅವೂ ಸಹ ಭಗವದ್ವಿಷಯದ ಅನುರಾಗದ ವಾಚಕವಲ್ಲ, ಕಾಮೋತ್ಪಾದಕವಾದ ಭೋಗಾಸಕ್ತಿಯ ವಾಚಕವೆಂದು ತಿಳಿಯಬೇಕು

ಪ್ರಶ್ನೆ 'ಜ್ಞಾನಮ್' ಎಂಬ ಪದವು ಯಾವ ಜ್ಞಾನದ ವಾಚಕ ? ಮತ್ತು ಇದು ಕಾಮನಿಂದ ಆವರಿಸಿದೆ ಎಂದು ಹೇಳಲು ಕಾರಣವೇನು ?

ಉತ್ತರ · ಇಲ್ಲಿ 'ಜ್ಞಾನಮ್' ಎಂಬ ಪದವು ಪರಮಾತ್ಮನ ಯಥಾರ್ಥ ಜ್ಞಾನದ ವಾಚಕವಾಗಿದೆ ಮತ್ತು ಕಾಮದಿಂದ ಅದು ಆವರಿಸಿರುತ್ತದೆ ಎಂದು ಹೇಳಿದೆ ಶಿಶುವು ತನ್ನನ್ನು ಜರಾಯು ಚರ್ಮವು ಆವರಿಸಿದ್ದರೂ ಅದನ್ನು ಹರಿದು ಹೊರಗೆ ಬರುವ ಶಕ್ತಿಯನ್ನು ಇಟ್ಟುಕೊಂಡಂತೆ ಮತ್ತು ಅಗ್ನಿಯು ಪ್ರಜ್ವಲಿತವಾಗಿ ತನ್ನನ್ನು ಆವರಿಸಿದ ಹೊಗೆಯನ್ನು ನಾಶಮಾಡಿಕೊಂಡಂತೆ, ಯಾವಾಗ ಯಾವುದಾದರೊಬ್ಬ ಮಹಾತ್ಮನ ಅಥವಾ ಶಾಸ್ತ್ರಗಳ ಉಪದೇಶದಂತೆ ಪರಮಾತ್ಮನ ತತ್ವಜ್ಞಾನವು ಜಾಗೃತವಾದಾಗ ಅವನು ಕಾಮದಿಂದ ಆವೃತವಾಗಿದ್ದರೂ ಕಾಮವನ್ನು ನಾಶಮಾಡಿ ಸ್ವಯಂಪ್ರಕಾಶಿತನಾಗುತ್ತಾನೆ ಅತಃ ಕಾಮವು ಅದನ್ನು ಆವೃತಮಾಡುತ್ತಿದ್ದರೂ ವಸ್ತುತಃ ಅದಕ್ಕಿಂತ ಬಲಹೀನವಾಗಿದೆ

ಕೊನೆಯ ಮಾತು : ಅರ್ಜುನನೇ ಕೇಳು, ಅವಿವೇಕಿಗೆ ತಾನು ಬಯಸಿದ ವಸ್ತು ದೊರೆತಾಗ ಆ ಬಯಕೆಯು ಗೆಳೆಯನಂತೆ ಕಂಡರೂ, ವಿವೇಕಿಗೆ ಈ ಬಯಕೆಯು ಅನರ್ಥವೆಂದೂ, ನನ್ನನ್ನು ಕೊರಕಲಿಗೆ ಕೆಡಹುವುದೆಂದೂ ಮೊದಲೇ ತಿಳಿದಿರುವುದರಿಂದ ಬಯಸಿದ ವಸ್ತು ದೊರೆತಾಗಲೂ ಅದವನ್ನು ಹಗೆಯೆಂದು

ತಿಳಿಯುವನು ಅವಿವೇಕಿಗಳಿಗಾದರೋ ದೊರೆತ ಸಂಪತ್ತು ಕಳೆದುಹೋದರೆ ದುಃಖ ವಾಗುವುದು ಅಷ್ಟೇ ಅಲ್ಲದೆ ಅದು ದೊರೆತಿರುವಾಗಲೂ ಎಷ್ಟು ಹಾಕಿದರೂ ತುಂಬದೆ ಇರುವಂಥಾದ್ದೂ ಸಾಕೆನಿಸದಿರುವಂಥಾದ್ದೂ ಆದ ಈ ಕಾಮದಿಂದ ಅವರ ವಿವೇಕ ಬುದ್ಧಿಯು ಮುಚ್ಚಲ್ಪಟ್ಟಿದೆ

ಸಂಬಂಧ ಕಾಮದ ವಾಸಸ್ಥಾನವು ಮುಂದಿನ ಶ್ಲೋಕದಲ್ಲಿ ಪ್ರತಿಪಾದಿ ಸಲ್ಪಡುತ್ತದೆ

**ಇಂದ್ರಿಯಾಣಿ ಮನೋಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥ ೪೦ ॥**

ತಾತ್ಪರ್ಯ . ಇಂದ್ರಿಯಗಳು, ಮನಸ್ಸು, ಬುದ್ಧಿ – ಇವು ಇದಕ್ಕೆ ಆಶ್ರಯ ಗಳೆಂದು ಹೇಳಲ್ಪಡುತ್ತವೆ ಇದು ಇವುಗಳ ದ್ವಾರಾ ಜ್ಞಾನವನ್ನು ಮುಚ್ಚಿ ಜೀವಾತ್ಮನನ್ನು ಮೋಹಗೊಳಿಸುತ್ತದೆ

## ವಿವರಣೆ

ಪ್ರಶ್ನೆ: ಇಂದ್ರಿಯ, ಮನ ಮತ್ತು ಬುದ್ಧಿ – ಈ ಎಲ್ಲವೂ ಈ ಕಾಮದ ವಾಸಸ್ಥಾನವೆಂದು ಹೇಳುವ ಅಭಿಪ್ರಾಯವೇನು ?

ಉತ್ತರ· ಇದರ ಅಭಿಪ್ರಾಯವೇನೆಂದರೆ – ಮನಸ್ಸು, ಬುದ್ಧಿ ಮತ್ತು ಇಂದ್ರಿಯ – ಇವು ಮನುಷ್ಯನ ವಶದಲ್ಲಿ ಇಲ್ಲದಿರುವ ಕಾರಣ ಇವುಗಳ ಮೇಲೆ ಈ ಕೆಟ್ಟ ಕಾಮವು ತನ್ನ ಅಧಿಕಾರವನ್ನು ಚಲಾಯಿಸುತ್ತದೆ ಅತಃ ಶ್ರೇಯ ಸ್ಸನ್ನು ಕೋರುವ ಮನುಷ್ಯನು ತನ್ನ ಮನಸ್ಸು, ಬುದ್ಧಿ, ಇಂದ್ರಿಯಗಳಿಂದ ಈ ಕಾಮರೂಪ ವೈರಿಯನ್ನು ಜಾಗ್ರತೆಯಾಗಿ ಹೊರಗೆ ಹಾಕಬೇಕು. ಅಥವಾ ಅದು ಹೊರಗೆ ಹೋಗದಿದ್ದರೆ ಅಲ್ಲಿಯೇ ನಿಗ್ರಹಿಸಿ ಅದನ್ನು ನಾಶಮಾಡಬೇಕು ಇಲ್ಲದಿದ್ದರೆ ಇದು ಮನೆಯಲ್ಲಿ ಸೇರಿದ ಕಳ್ಳನಂತೆ ಮನುಷ್ಯ ಜೀವ ರೂಪ ಅಮೂಲ್ಯ ಧನವನ್ನು ಹಾಳುಮಾಡುತ್ತದೆ.

ಪ್ರಶ್ನೆ ಈ ಕಾಮವು ಮನ, ಬುದ್ಧಿ, ಇಂದ್ರಿಯಗಳ ಮೂಲಕವಾಗಿಯೇ ಜ್ಞಾನವನ್ನು ಆಚ್ಛಾದಿಸಿ ಜೀವಾತ್ಮನನ್ನು ಮೋಹಿತನನ್ನಾಗಿ ಮಾಡುತ್ತದೆ – ಎಂದರೇನು ?

ಉತ್ತರ : ಇದರಿಂದ ಈ 'ಕಾಮ'ವು ಮನುಷ್ಯನ ಮನಸ್ಸು, ಇಂದ್ರಿಯ, ಬುದ್ಧಿಗಳಲ್ಲಿ ನೇರಿ ಅವನ ವಿವೇಕ ಶಕ್ತಿಯನ್ನು ನಷ್ಟಮಾಡುತ್ತದೆ. ಮತ್ತು ಭೋಗ್ಯ ಪದಾರ್ಥಗಳಲ್ಲಿ ಸುಖವನ್ನು ತೋರಿಸಿ ಅವನನ್ನು ಪಾಪಕರ್ಮ ಗಳಲ್ಲಿ ಪ್ರವೃತ್ತಿಮಾಡಿಸುತ್ತದೆ ಇದರಿಂದ ಮನುಷ್ಯನು ಅಧಃಪತನನಾಗು ತ್ತಾನೆ ಆದುದರಿಂದ ಮನುಷ್ಯನು ಯಾವಾಗಲೂ ಜಾಗರೂಕನಾಗಿರಬೇಕು. ಈ ವಿಷಯವನ್ನು ಒಂದು ದೃಷ್ಟಾಂತದಿಂದ ಸ್ಪಷ್ಟವಾಗಿ ತಿಳಿದುಕೊಳ್ಳಬಹುದು. ಹೇಗೆಂದರೆ–

ಚೇತನಸಿಂಹನೆಂಬ ರಾಜನಿದ್ದನು ಅವನ ಪ್ರಧಾನ ಮಂತ್ರಿಯ ಹೆಸರು ಜ್ಞಾನಸಾಗರ ಪ್ರಧಾನ ಮಂತ್ರಿಗೆ ಅಧೀನನಾಗಿ ಅವನಿಗೊಬ್ಬ ಚಂಚಲಸಿಂಹ ನೆಂಬ ಸಹಕಾರಿ ಮಂತ್ರಿ ಇದ್ದನು ರಾಜನು ತನ್ನ ಮುಖ್ಯಮಂತ್ರಿ ಮತ್ತು ಸಹಕಾರಿ ಮಂತ್ರಿಯೊಡನೆ ತನ್ನ ರಾಜಧಾನಿಯಾದ ಪುಷ್ಯಪುರಿಯಲ್ಲಿ ವಾಸ ಮಾಡುತ್ತಿದ್ದನು ಆ ರಾಜನ ರಾಜ್ಯದಲ್ಲಿ ಹತ್ತು ಜಿಲ್ಲೆಗಳಿದ್ದವು. ಪ್ರತಿ ಒಂದು ಜಿಲ್ಲೆಯ ಮುಖ್ಯಸ್ಥಾನದಲ್ಲಿ ಒಬ್ಬ ಜಿಲ್ಲಾಧಿಕಾರಿಯು ನಿಯುಕ್ತ ನಾಗಿದ್ದನು ರಾಜನು ವಿಚಾರಶೀಲನೂ, ಕರ್ಮ ಪ್ರವೀಣನೂ, ಸುಶೀಲನೂ ಆಗಿದ್ದನು ಅವನ ರಾಜ್ಯದಲ್ಲಿ ಪ್ರಜೆಗಳೆಲ್ಲರೂ ಸುಖವಾಗಿದ್ದರು ರಾಜ್ಯವು ಕ್ರಮವಾಗಿ ಉನ್ನತಿಯಾಗುತ್ತಿತ್ತು ಹೀಗೆ ಇರುವಾಗ ಅವನ ರಾಜ್ಯದಲ್ಲಿ ಜಗಮೋಹನನೆಂಬ ಒಬ್ಬಾತ ಠಕ್ಕರ ಸರದಾರನು ಬಂದು ನೇರಿಕೊಂಡನು. ಅವನು ಕುಚಕ್ರಿಯೂ. ಕಪಟಿಯೂ, ಕುತಂತ್ರದಿಂದ ಕರ್ಮವನ್ನು ಸಾಧಿಸು ವವನೂ ಆಗಿದ್ದನು ಅವನು ಅಂತರ್ಯದಲ್ಲಿ ವಿಷವನ್ನು ತುಂಬಿಕೊಂಡಿದ್ದರೂ ಅವನ ಮಾತುಗಳು ಬಹಳ ರುಚಿಕರವಾಗಿದ್ದವು. ಅವನು ಯಾರೊಂದಿಗೆ ಮಾತಾಡಿದರೂ ಅವರನ್ನು ಮೋಹಿತರನ್ನಾಗಿ ಮಾಡುತ್ತಿದ್ದನು ಅವನು ಬರು ವಾಗ ಒಬ್ಬ ವ್ಯಾಪಾರಿಯ ವೇಷದಲ್ಲಿ ಬಂದನು. ಅವನು ಜಿಲ್ಲೆಯ ಅಧಿಕಾರಿ ಯನ್ನು ಕಂಡು ಅವನನ್ನು ಲಂಚ ವಗೈರೆಯಿಂದ ಮರುಳು ಮಾಡಿ, ಅವನಿಂದ ರಾಜ್ಯದಲ್ಲೆಲ್ಲ ತನ್ನ ವ್ಯಾಪಾರವನ್ನು ನಡೆಯಿಸಲು ಅನುಮತಿ ಪಡೆದುಕೊಂಡನು. ಪ್ರತಿ ಜಿಲ್ಲಾಧೀಶರಿಗೂ ಅವನು ಬಹಳ ರುಚಿಯನ್ನು ತೋರಿಸಿದನು ಅವರು ಅವನ ಲಂಚ ಇತ್ಯಾದಿಗಳಿಗೆ ವಶರಾದರೂ ತಮ್ಮ ಆಫೀಸರ ಅನುಮತಿ ಇಲ್ಲದೆ ಏನೂ ಮಾಡುವಂತಿರಲಿಲ್ಲ. ಬಲೆಯನ್ನು ಬೀಸುವ ವ್ಯಾಪಾರಿಯಾದ ಜಗ

ಮೋಹನನೆ ನಲಹೆಯಂತೆ ಜಿಲ್ಲಾಧಿಕಾರಿಗಳೆಲ್ಲರೂ ಸೇರಿ ತಮ್ಮ ಆಫೀಸರಾದ ಚಂಚಲಸಿಂಹನಲ್ಲಿಗೆ ಆ ವ್ಯಾಪಾರಿಯನ್ನು ಕರೆದುಕೊಂಡು ಹೋದರು ಮೋಸಗಾರನಾದ ವ್ಯಾಪಾರಿಯು ಆ ಆಫೀಸರಿಗೆ ವಿಶೇಷವಾಗಿ ಲಂಚ ವಗೈರೆ ಕೊಟ್ಟು ಅವನನ್ನು ಮರುಳುಗೊಳಿಸಿದನು. ಇದರ ಫಲವಾಗಿ ಚಂಚಲಸಿಂಹನೂ ಸಹ ಅವನ ರುಚಿಯಾದ ಮಾತಿಗೆ ಮರುಳಾದನು – ವಶವಾದನು ನಂತರ ಚಂಚಲ ಸಿಂಹನು ವ್ಯಾಪಾರಿಯನ್ನು ಮುಖ್ಯಮಂತ್ರಿಯಾದ ಜ್ಞಾನಸಾಗರನಲ್ಲಿಗೆ ಕರೆದು ಕೊಂಡು ಹೋದನು. ಜ್ಞಾನಸಾಗರನಾದರೋ ಬುದ್ಧಿವಂತನಾಗಿದ್ದನು ಆದರೂ ಅವನು ದುರ್ಬಲ ಮನಸ್ಸಿನವನಾಗಿದ್ದನು ಅವನು ಸ್ವತಃ ಮೀಮಾಂಸೆಯನ್ನು ಮಾಡಿ ನಿರ್ಣಯ ಮಾಡಲಾರದವನಾಗಿದ್ದನು ಈ ದುರ್ಬಲತೆಯಿಂದ ಅವನು ತನ್ನ ಸಹಕಾರಿಯಾದ ಚಂಚಲಸಿಂಹ ಮತ್ತು ಇತರ ಜಿಲ್ಲಾಧೀಶರ ಮಾತಿಗೆ ಮರುಳಾಗುವ ಸ್ವಭಾವವುಳ್ಳವನಾದನು ಅವರು ಇವನಿಂದ ಲಾಭವನ್ನು ಪಡೆದುಕೊಳ್ಳುತ್ತಿದ್ದರು ಈಗಲೂ ಹಾಗೆಯೇ ಆಯಿತು ಅವನು ಚಂಚಲಸಿಂಹ ಮತ್ತು ಹತ್ತು ಜನ ಜಿಲ್ಲಾಧೀಶರ ಮಾತಿಗೆ ಮರುಳಾದನು ನಂತರ ಜಗಮೋಹನ ವ್ಯಾಪಾರಿಗೆ ವಶನಾದನು ಅವನು ಜಗಮೋಹನ ವ್ಯಾಪಾರಿಗೆ ತನ್ನ ರಾಜ್ಯದ ತುಂಬ ವ್ಯಾಪಾರ ಮಾಡಲು ಪರವಾನಗಿಯನ್ನು ಕೊಡಲು ಒಪ್ಪಿದನು ಆದರೆ ಮಹಾರಾಜನಾದ ಚೇತನಸಿಂಹನು ಒಪ್ಪದೆ ಇದ್ದರೆ ನಮಗೆ ರಾಜ್ಯದಲ್ಲಿ ವ್ಯಾಪಾರ ಮಾಡುವ ಪರವಾನಗಿ ಸಿಗುತ್ತಿರಲಿಲ್ಲ ಆಗ ಮೋಸಗಾರನಾದ ವ್ಯಾಪಾರಿಯು ಮುಖ್ಯಮಂತ್ರಿಯನ್ನು ಕರೆದುಕೊಂಡು ರಾಜನ ಹತ್ತಿರ ಹೋದನು. ಅತಿ ಚತುರನಾದ ಆ ವ್ಯಾಪಾರಿಯು ರಾಜನಿಗೂ ಸಹ ದೊಡ್ಡ ದೊಡ್ಡ ಪ್ರಲೋಭನೆಗಳನ್ನು ತೋರಿಸಿದನು ರಾಜನೂ ಸಹ ಹಿಂದುಮುಂದು ನೋಡದೆ ಲೋಭಕ್ಕೆ ಸಿಕ್ಕಿಬಿದ್ದನು ರಾಜನು ಜಗಮೋಹನನಿಗೆ ತನ್ನ ರಾಜ್ಯದಲ್ಲಿ ತನಗೆ ಬೇಕಾದ ವ್ಯಾಪಾರ ಮಾಡಬಹುದೆಂದೂ, ಅವನು ಅಂಗಡಿಗಳನ್ನೂ ಸಹ ಸ್ಥಾಪಿಸಬಹುದೆಂದೂ ಅನುಮತಿ ಕೊಟ್ಟನು ನಂತರ ಜಗಮೋಹನನು ಹತ್ತು ಜನ ಜಿಲ್ಲಾಧೀಶರಿಗೂ ಇಬ್ಬರು ಮಂತ್ರಿಗಳಿಗೂ ಕೈತುಂಬ ಹಣಕೊಟ್ಟು ಅವರನ್ನು ಪೂರ್ಣವಾಗಿ ವಶಪಡಿಸಿಕೊಂಡನು ಆಗ ಅವನಿಗೆ ರಾಜ್ಯದಲ್ಲೆಲ್ಲಾ ತನ್ನ ಜಾಲವನ್ನು ಬೀಸಲು ಅನುಕೂಲವಾಯಿತು ಸರ್ವತ್ರ ಅವನ ಪ್ರಭಾವವು ವ್ಯಾಪಿಸಿದಾಗ ಅವನು ಸುಲಭವಾಗಿ ಪ್ರಜೆಗಳನ್ನು

ಲೂಟಿ ಮಾಡಹತ್ತಿದನು. ಇಬ್ಬರೂ ಮಂತ್ರಿಗಳೂ, ಜಿಲ್ಲಾಧೀಶರೂ ಅವನಿಗೆ ವಶವಾಗಿರುವುದರಿಂದ ಅವನಿಗೆ ಎಲ್ಲಾ ಕೆಲಸಗಳು ಸುಲಭವಾದವು. ಕೊನೆ ಕೊನೆಗೆ ರಾಜನಿಗೂ ಸಹ ಲೂಟಿ ಮಾಡಿದ್ದರಲ್ಲಿ ಭಾಗ ಕೊಟ್ಟು ಅವನನ್ನೂ ತನ್ನ ವಶಮಾಡಿಕೊಂಡನು. ನಂತರ ಕುಶಲತೆಯಿಂದಲೂ, ರುಚಿ ರುಚಿಯಾದ ಮೃದುವಾದ ಮಾತಿನಿಂದಲೂ ರಾಜನನ್ನೂ ಹಾಗೂ ವಿಷಯಲೋಲುಪ್ತರಾದ ಎಲ್ಲಾ ಆಫೀಸರನ್ನೂ ಕುಮಾರ್ಗಗಾಮಿಗಳನ್ನಾಗಿ ಮಾಡಿ, ಅವನು ಎಲ್ಲ ರನ್ನೂ ಶಕ್ತಿಹೀನರನ್ನಾಗಿಯೂ, ಕರ್ಮಭ್ರಷ್ಟರನ್ನಾಗಿಯೂ ಮತ್ತು ದುರ್ವ್ಯ ಸನ ಪ್ರಿಯರನ್ನಾಗಿಯೂ ಮಾಡಿ, ಒಳಗಿಂದೊಳಗೇ ತೀವ್ರವಾಗಿ ತನ್ನ ಬಲ ವನ್ನು ಬೆಳೆಯಿಸಿಕೊಂಡು ರಾಜ್ಯದಲ್ಲೆಲ್ಲ ತನ್ನ ಅಧಿಕಾರವನ್ನು ಚಲಾಯಿಸಿ ದನು ಇಷ್ಟಕ್ಕೆ ತೃಪ್ತಿಪಡದೆ ರಾಜನ ಸರ್ವಸ್ವವನ್ನೂ ಲೂಟಿಮಾಡಿ ಕೊನೆಗೆ ಅವನನ್ನು ಹಿಡಿದು ಖೈದಿಯನ್ನಾಗಿ ಮಾಡಿದನು

ಈ ದೃಷ್ಟಾಂತದ ದ್ರಾಷ್ಟಾಂತ : ರಾಜ ಚೇತನಸಿಂಹನೆಂದರೆ 'ಜೀವಾತ್ಮ', ಪ್ರಧಾನಮಂತ್ರಿ ಜ್ಞಾನಸಾಗರನೆಂದರೆ 'ಬುದ್ಧಿ', ಸಹಕಾರಿ ಮಂತ್ರಿ ಚಂಚಲಸಿಂಹನೆಂದರೆ 'ಮನಸ್ಸು', ಮಧ್ಯಪುರಿ ರಾಜಧಾನಿ ಅಂದರೆ 'ಹೃದಯ', ಹತ್ತುಜನ ಜಿಲ್ಲಾಧೀಶರೆಂದರೆ 'ದಶೇಂದ್ರಿಯಗಳು', ರಕ್ಕರ ಸರ ದಾರನಾದ ಜಗಮೋಹನನೆಂದರೆ 'ಕಾಮ', ವಿಷಯ ಭೋಗಗಳ ಸುಖದ ಪ್ರಲೋಭನವೇ ಎಲ್ಲರನ್ನು ಮರುಳುಗೊಳಿಸುವುದು, ವಿಷಯ ಭೋಗಗಳಲ್ಲಿ ತೊಡಗಿಸಿ ಜೀವಾತ್ಮನನ್ನು ನಿಜವಾದ ಸುಖದ ಮಾರ್ಗದಿಂದ ಭ್ರಷ್ಟನನ್ನಾಗಿ ಮಾಡುವುದೇ ಅವರನ್ನು ಲೂಟಿ ಮಾಡುವುದು, ಮತ್ತು ಜೀವಾತ್ಮನ ಜ್ಞಾನ ವನ್ನು ಆವರಿಸಿ ಮೋಹಿತನನ್ನಾಗಿ ಮಾಡಿ ಮನುಷ್ಯ ಜೀವನದ ಪರಮ ಲಾಭ ದಿಂದ ದೂರ ಮಾಡುವುದೇ ಖೈದಿಯನ್ನಾಗಿ ಮಾಡುವುದು

ಅಭಿಪ್ರಾಯವೇನೆಂದರೆ, ಈ ಶ್ರೇಯೋಮಾರ್ಗದ ವಿರೋಧಿಯಾ ದುರ್ಜಯ ಶತೃವಾದ ಕಾಮವು ಇಂದ್ರಿಯ, ಮನಸ್ಸು ಮತ್ತು ಬುದ್ಧಿಗಳಿಗೆ ವಿಷಯಭೋಗವೆಂಬ ಮಿಥ್ಯಾಸುಖದ ಪ್ರಲೋಭನವನ್ನುಂಟುಮಾಡಿ, ಅವೆ ಲ್ಲವುಗಳ ಮೇಲೆ ತನ್ನ ಅಧಿಕಾರವನ್ನು ಸ್ಥಾಪಿಸಿ, ಮನಸ್ಸು, ಬುದ್ಧಿ, ಇಂದ್ರಿ ಯಗಳ ಮುಖಾಂತರ ವಿಷಯಸುಖರೂಪ ಲೋಭದಿಂದ ಜೀವಾತ್ಮನ ಜ್ಞಾನ ವನ್ನು ಆವರಿಸಿ ಅವನನ್ನು ಮೋಹಮಯ ಸಂಸಾರರೂಪ ಜೈಲಿನಲ್ಲಿ ನೂಕು

ತ್ತಾನೆ. ಇಷ್ಟೇ ಅಲ್ಲ, ಪರಮಾತ್ಮ ಪ್ರಾಪ್ತಿರೂಪವಾದ ವಾಸ್ತವಿಕ ಧನದಿಂದ ವಂಚಿತನನ್ನಾಗಿ ಮಾಡಿ ಅಮೂಲ್ಯ ಮನುಷ್ಯ ಜೀವನವನ್ನು ನಾಶಮಾಡುತ್ತಾನೆ.

ಸಾರಾಂಶ ರಾಜನಿಗೆ ಬೆಟ್ಟದ ಮೇಲೆ ಇರುವ ಕೋಟೆಯು ವಾಸಸ್ಥಾನವಾಗಿರುವಂತೆ ಕಾಮಕ್ಕೆ ಜ್ಞಾನೇಂದ್ರಿಯಗಳು, ಮನಸ್ಸು, ಬುದ್ಧಿ ಇವು ವಾಸಸ್ಥಾನಗಳು ಎನಿಸುತ್ತವೆ ಈ ಮೂರರ ಆಶ್ರಯದಿಂದಲೇ ಕಾಮವು ವಿವೇಕದ ಬುದ್ಧಿಯನ್ನು ಮುಚ್ಚಿ ದೇಹಾಭಿಮಾನಿಯಾದ ಜೀವನ್ನು ಮರುಳುಗೊಳಿಸಿದೆ

ಸಂಬಂಧ : ಈ ಪ್ರಕಾರ ಕಾಮವೆಂಬ ವೈರಿಯ ಅನ್ಯಾಯಚಾರ ಮತ್ತು ಅವಿತುಕೊಂಡಿರುವ ಸ್ಥಾನದ ಪರಿಚಯವನ್ನು ಮಾಡಿದ್ದಾಯಿತು ಮುಂದಿನ ಶ್ಲೋಕದಲ್ಲಿ ಕಾಮರೂಪ ವೈರಿಯನ್ನು ನಾಶಮಾಡುವ ಯುಕ್ತಿಯು ಪ್ರತಿಪಾದಿಸಲ್ಪಡುತ್ತದೆ

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನ ನಾಶನಮ್ ॥ ೪೧ ॥**

ತಾತ್ಪರ್ಯ : ಎಲೈ ಅರ್ಜುನಾ, ಆದುದರಿಂದ ನೀನು ಮೊದಲು ಇಂದ್ರಿಯಗಳನ್ನು ವಶಮಾಡಿಕೊಂಡು ಜ್ಞಾನವಿಜ್ಞಾನಗಳನ್ನು ನಾಶಮಾಡುವ ಈ ಪಾಪಯನ್ನು ನಾಶಮಾಡು.

## ವಿವರಣೆ

ಪ್ರಶ್ನೆ : 'ತಸ್ಮಾತ್' ಮತ್ತು 'ಆದೌ'–ಈ ಎರಡೂ ಪದಗಳ ಪ್ರಯೋಗ ಮಾಡಿ ಇಂದ್ರಿಯಗಳನ್ನು ವಶಮಾಡಿಕೊಳ್ಳುವಂತೆ ಹೇಳಲು ಕಾರಣವೇನು ?

ಉತ್ತರ . 'ತಸ್ಮಾತ್' ಎಂಬ ಪದವು ಹೇತುವಾಚಕವಾಗಿದೆ ಇದರಿಂದ ಕೂಡಿದ 'ಆದೌ' ಪದವನ್ನು ಪ್ರಯೋಗಮಾಡಿ ಇಂದ್ರಿಯಗಳನ್ನು ವಶಮಾಡಿಕೊಳ್ಳಲು ಹೇಳಿದ ಭಾವವೇನೆಂದರೆ 'ಕಾಮ'ವು, ಸರ್ವಾನರ್ಥಕ್ಕೆ ಮೂಲಕಾರಣವಾಗಿದೆ. ಇದು ಪ್ರಥಮ ಇಂದ್ರಿಯಗಳಲ್ಲಿ ಪ್ರವಿಷ್ಟವಾಗಿ ಅವುಗಳಿಂದ ಮನ, ಬುದ್ಧಿಗಳಲ್ಲಿ ಮೋಹವನ್ನುಂಟುಮಾಡಿ ಜೀವಾತ್ಮನನ್ನು ಭ್ರಮೆಯಲ್ಲಿ ಬೀಳಿಸುತ್ತದೆ ಇದರ ನಿವಾಸಸ್ಥಾನವು ಮನಸ್ಸು, ಬುದ್ಧಿ, ಇಂದ್ರಿಯಗಳೇ.

ಆದುದರಿಂದ ಮೊದಲು ಇಂದ್ರಿಯಗಳ ಮೇಲೆ ಅಧಿಕಾರವನ್ನು ಮಾಡಿ ಈ ಕಾಮರೂಪ ಶತ್ರುವನ್ನು ಜಯಿಸಬೇಕು. ಇಷ್ಟೇ ಅಲ್ಲ,ಅವಶ್ಯವಾಗಿ ನಾಶಮಾಡಿ ಕೊಳ್ಳಬೇಕು ಇದರ ವಾಸಸ್ಥಾನವನ್ನು ತಡೆಯುವುದರಿಂದಲೇ ಈ ಕಾಮ ರೂಪ ಶತ್ರುವನ್ನು ಕೊಲ್ಲಲು ಸಹಾಯವಾಗುತ್ತದೆ ಆದುದರಿಂದ ಮೊದಲು ಇಂದ್ರಿಯಗಳನ್ನು ನಂತರ ಮನಸ್ಸನ್ನು ತಡೆಯಬೇಕು. ಇದು ನಿಯಮ

ಪ್ರಶ್ನೆ : ಇಂದ್ರಿಯಗಳನ್ನು ಯಾವ ಯುಕ್ತಿಯಿಂದ ಗೆಲ್ಲಬೇಕು ?

ಉತ್ತರ : ಅಭ್ಯಾಸ, ವೈರಾಗ್ಯವೆಂಬ ಈ ಎರಡು ಉಪಾಯಗಳಿಂದ ಇಂದ್ರಿಯಗಳು ವಶವಾಗುತ್ತವೆ ಈ ಎರಡು ಉಪಾಯಗಳೇ ಮನಸ್ಸನ್ನೂ ಸಹ ವಶಮಾಡಿಕೊಳ್ಳಲು ಸಹಾಯ ಮಾಡುತ್ತವೆ

ಪ್ರಶ್ನೆ . ವೈರಾಗ್ಯವೆಂದರೇನು ?

ಉತ್ತರ : ಅ ೧೮ ಶ್ಲೋಕ ೩೮ ರಲ್ಲಿ ಹೇಳಿದಂತೆ ವಿಷಯ ಮತ್ತು ಇಂದ್ರಿಯಗಳ ಸಂಯೋಗದಿಂದ ಆಗುವ ರಾಜಸ ಸುಖವನ್ನು ಮತ್ತು ಅ ೧೮ ಶ್ಲೋಕ ೩೯ ರಲ್ಲಿ ಹೇಳಿದಂತೆ ನಿದ್ರಾ,ಆಲಸ್ಯ ಮತ್ತು ಪ್ರಮಾದದಿಂದ ಉಂಟಾದ ತಾಮಸ ಸುಖವನ್ನು ವಾಸ್ತವವಾಗಿ ಕ್ಷಣಿಕ, ನಾಶವಂತ ಮತ್ತು ದುಃಖರೂಪವೆಂದು ತಿಳಿದು ಇಹಲೋಕ ಮತ್ತು ಪರಲೋಕ ಸಮಸ್ತ ಭೋಗಗಳನ್ನು ಬಿಟ್ಟಿರುವುದೇ ವೈರಾಗ್ಯ.

ಪ್ರಶ್ನೆ : ಅಭ್ಯಾಸವೆಂದರೇನು ?

ಉತ್ತರ ಪರಮಾತ್ಮನ ನಾಮ, ರೂಪ, ಗುಣ, ಚರಿತ್ರಾದಿಗಳನ್ನು ಶ್ರವಣ ಮಾಡುವುದು, ಮನನ ಮಾಡುವುದು, ಕೀರ್ತನ ಮಾಡುವುದು ಮತ್ತು ನಿಃಸ್ವಾರ್ಥ ಬುದ್ಧಿಯಿಂದ ಲೋಕಸೇವಾ ಕಾರ್ಯದಲ್ಲಿ ಇಂದ್ರಿಯಗಳನ್ನು ತೊಡಗಿಸುವುದು ಮತ್ತು ಧಾರಣ ಶಕ್ತಿಯ ಬಲದಿಂದ ಇಂದ್ರಿಯಗಳ ಕ್ರಿಯೆಗಳನ್ನು ಶಾಸ್ತ್ರಕ್ಕೆ ಅನುಕೂಲವಾಗಿ ನಡೆಯುವಂತೆ ಮಾಡುವುದು ಮತ್ತು ಇಂದ್ರಿಯಗಳಲ್ಲಿ ಸ್ವೇಚ್ಛಾಚಾರವೆಂಬ ದೋಷವು ಬರದಂತೆ ನೋಡಿಕೊಳ್ಳುವುದು ಮತ್ತು—

**ತಚ್ಚಿಂತನಂ ತತ್ಕಥನಮನ್ಯೋನ್ಯ ತತ್ಪ್ರಬೋಧನಮ್ ।**
**ಏತದೇಕಂ ಪರತ್ವಂಚ ಬ್ರಹ್ಮಾಭ್ಯಾಸಂ ವಿದುರ್ಬುಧಾಃ ॥**

ಎಂಬಂತೆ ಆತ್ಮ ಚಿಂತನೆ, ಆತ್ಮಕಥನ, ಅನ್ಯೋನ್ಯವಾಗಿ ಆತ್ಮನ ವಿಷಯ

ವನ್ನೇ ಮಾತಾಡುವುದು – ಇದೇ ಬ್ರಹ್ಮಾಭ್ಯಾಸ ಈ ಅಭ್ಯಾಸದಿಂದ ಇಂದ್ರಿಯ ಮನಸ್ಸುಗಳೆಲ್ಲ ಸ್ವಾಧೀನವಾಗುತ್ತವೆ ಈ ಅಭ್ಯಾಸ ಬಹಳ ಬಲವುಳ್ಳದ್ದು ಇದರಿಂದ ಎಲ್ಲವನ್ನು ಸಾಧಿಸಿ ಆತ್ಮ ಸಾಕ್ಷಾತ್ಕಾರವನ್ನು ಮಾಡಿಕೊಳ್ಳಬಹುದು. ಹಾಗೆ ಯುಕ್ತಿಯಿಂದ ಇಂದ್ರಿಯ ಮತ್ತು ಮನಸ್ಸನ್ನು ಸ್ವಾಧೀನಮಾಡಿಕೊಳ್ಳಬಹುದು

ಪ್ರಶ್ನೆ "ಜ್ಞಾನ ಮತ್ತು ವಿಜ್ಞಾನ" ಈ ಎರಡೂ ಪದಗಳನ್ನು ಪ್ರಯೋಗ ಮಾಡಿದ್ದರ ಅರ್ಥವೇನು ? ಮತ್ತು ಕಾಮವು ಇವುಗಳನ್ನು ನಾಶಮಾಡುತ್ತದೆ ಅಂದರೆ ಅರ್ಥವೇನು ?

ಉತ್ತರ . ಜ್ಞಾನವೆಂದರೆ ಶಾಸ್ತ್ರಜ್ಞಾನ, ವಿಜ್ಞಾನವೆಂದರೆ ಅನುಭವ ಜ್ಞಾನ ಎಂದು ಒಂದರ್ಥ. ಜ್ಞಾನವೆಂದರೆ ಪರೋಕ್ಷಜ್ಞಾನ, ವಿಜ್ಞಾನವೆಂದರೆ ಅಪರೋಕ್ಷ ಜ್ಞಾನವೆಂದು ಇನ್ನೊಂದರ್ಥ ಮತ್ತು ಪರಮಾತ್ಮನ ನಿರ್ಗುಣ, ನಿರಾಕಾರ, ತತ್ವದ ಪ್ರಭಾವ, ಮಹಾತ್ಮ್ಯ ಮತ್ತು ರಹಸ್ಯಯುಕ್ತ ಯಥಾರ್ಥ ಜ್ಞಾನಕ್ಕೆ 'ಜ್ಞಾನ'ವೆಂತಲೂ, ತಥಾ ಸಗುಣ, ನಿರಾಕಾರ ಮತ್ತು ದಿವ್ಯ ಸಾಕಾರ ತತ್ವದ ಲೀಲೆ, ರಹಸ್ಯ, ಗುಣ, ಮಹತ್ವ ಮತ್ತು ಪ್ರಭಾವದಿಂದ ಕೂಡಿದ ಯಥಾರ್ಥ ಜ್ಞಾನವನ್ನು "ವಿಜ್ಞಾನ" ವೆಂತಲೂ ಹೇಳುತ್ತಾರೆ. ಈ ಜ್ಞಾನ – ವಿಜ್ಞಾನದ ಯಥಾರ್ಥ ಪ್ರಾಪ್ತಿಯಾಗಲು ಹೃದಯದಲ್ಲಿ ಉಂಟಾಗುವ ಆ ಶಂಕೆಯು ಉತ್ಪನ್ನವಾದರೆ ಅದನ್ನು ಈ ಮಹಾ ಶತೃರೂಪ ಕಾಮರೂಪ ಶತೃವು ತನ್ನ ಮೋಹಿನಿ ಶಕ್ತಿಯಿಂದ ನಿತ್ಯ – ನಿರಂತರ ದಬಾಯಿಸುತ್ತಿರುತ್ತದೆ ಅರ್ಥಾತ್ ಆ ಆಕಾಂಕ್ಷೆಯ ಜಾಗೃತಿಯಿಂದ ಉತ್ಪನ್ನವಾದ ಜ್ಞಾನ–ವಿಜ್ಞಾನದ ಸಾಧನೆಗಳಲ್ಲಿ ಬಾಧೆಯನ್ನುಂಟುಮಾಡುತ್ತಿರುತ್ತದೆ. ಆದುದರಿಂದ ಇವು ಪ್ರಕಟವಾಗಲಾರವು ; ಆದುದರಿಂದ ಕಾಮವು ವಿಜ್ಞಾನಗಳನ್ನು ನಾಶಮಾಡುವುದು ಎಂದು ಹೇಳಿದೆ.

ಪ್ರಶ್ನೆ : ನಾಶವೆಂದರೇನು ?

ಉತ್ತರ : ನಾಶವೆಂಬ ಪದಕ್ಕೆ ಎರಡರ್ಥ. ಒಂದು ಪ್ರಕಟವಾಗಿರುವ ವಸ್ತುವನ್ನು ಅಪ್ರಕಟಮಾಡುವುದು ಎರಡನೆಯದು ವಸ್ತುವನ್ನು ಅಭಾವ ಮಾಡುವುದು. ಇಲ್ಲಿ ವಸ್ತುವನ್ನು ಅಪ್ರಕಟವನ್ನಾಗಿ ಮಾಡುವುದು ಎಂಬ ಅರ್ಥದಲ್ಲಿ ಪ್ರಯೋಗವಾಗಿದೆ. ಯಾಕೆಂದರೆ ಪೂರ್ವ ಶ್ಲೋಕದಲ್ಲಿಯೂ

ಜ್ಞಾನವು ಕಾಮದಿಂದ ಆವೃತವಾಗಿದೆ ಎಂದು ಹೇಳಿದೆ ಜ್ಞಾನ ಮತ್ತು ವಿಜ್ಞಾನಗಳನ್ನು ಸಮೂಲ ನಷ್ಟಮಾಡುವ ಶಕ್ತಿಯು ಕಾಮದಲ್ಲಿಲ್ಲ. ಯಾಕೆಂದರೆ ಕಾಮದ ಉತ್ಪತ್ತಿಯು ಅಜ್ಞಾನದಿಂದ, ಆದುದರಿಂದ ಜ್ಞಾನ-ವಿಜ್ಞಾನಗಳು ಒಂದು ಸಾರೆ ಪ್ರಕಟವಾದರೆ ಅಜ್ಞಾನವು ಸಮೂಲವಾಗಿ ನಾಶ ಮಾಡುತ್ತದೆ ನಂತರ ಜ್ಞಾನ ವಿಜ್ಞಾನದ ನಾಶದ ಪ್ರಶ್ನೆಯೇ ಉಳಿಯುವುದಿಲ್ಲ.

ಸಿದ್ಧಾರ್ಥ ಅರ್ಜುನನೇ, ಕೇಳು! ಇಂದ್ರಿಯಗಳು, ಮನಸ್ಸು, ಬುದ್ಧಿ – ಇವೇ ಬಯಕೆಗೆ ಆಶ್ರಯವಾದುದರಿಂದ ನೀನು ಮೊದಲೇ ಇಂದ್ರಿಯ ಮನೋಬುದ್ಧಿಗಳನ್ನು ಹಿಡಿತದಲ್ಲಿಟ್ಟುಕೊಂಡು ಪಾಪಸ್ವಭಾವದ ಮತ್ತು ಶಾಸ್ತ್ರದಿಂದಲೂ, ಗುರುಗಳಿಂದಲೂ ಆತ್ಮವಿಚಾರವಾಗಿ ತಿಳಿದ ಜ್ಞಾನವನ್ನು, ಅದನ್ನು ಅನುಭವಕ್ಕೆ ತಂದುಕೊಡುವ ವಿಜ್ಞಾನವನ್ನು, ಹಾಳುಮಾಡುವಂಥ ಈ ಕಾಮುವನ್ನು ತೊರೆದುಬಿಡು

ಸಂಬಂಧ: ಕಾಮುವನ್ನು ಗೆಲ್ಲುವ ಬಲವು ಮುಂದಿನ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುತ್ತದೆ.

**ಇಂದ್ರಿಯಾಣಿ ಪರಾಣ್ಯಾಹು ಇಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾಬುದ್ರಿಯೋ ಬುದ್ಧೇಃ ಪರತಸ್ತು ಸಃ ॥ ೪೨ ॥**

ತಾತ್ಪರ್ಯ: ಇಂದ್ರಿಯಗಳು ಹೆಚ್ಚಿನವು ಎಂದು ಹೇಳುವರು; ಇಂದ್ರಿಯ ಗಳಿಗಿಂತ ಮನಸ್ಸು ಹೆಚ್ಚಿನದು ಮನಸ್ಸಿಗಿಂತಲೂ ಬುದ್ಧಿ ಹೆಚ್ಚಿನದು. ಆದರೆ ಯಾವನು ಬುದ್ಧಿಗಿಂತ ಹೆಚ್ಚಿನವನೋ ಅವನು ಆತ್ಮ

## ವಿವರಣೆ

ಪ್ರಶ್ನೆ: ಇಂದ್ರಿಯಗಳನ್ನು ಸ್ಥೂಲ ಶರೀರಕ್ಕಿಂತ ಪರವೆಂದು ಹೇಳಿದೆ ಯಲ್ಲ – ಈ ಮಾತಿಗೆ ಆಧಾರವೇನು?

ಉತ್ತರ: ಕಠೋಪನಿಷತ್ತಿನಲ್ಲಿ ಶರೀರಕ್ಕೆ ರಥವೆಂತಲೂ, ಇಂದ್ರಿಯಗಳಿಗೆ ಕುದುರೆಗಳೆಂತಲೂ ಹೇಳಿದೆ ರಥಕ್ಕಿಂತಲೂ ಕುದುರೆಗಳು ಶ್ರೇಷ್ಠವೆಂತಲೂ, ರಥವು ಜಡವೆಂಬುದೂ, ಕುದುರೆಗಳು ಚೇತನವೆಂಬುದೂ ಪ್ರಸಿದ್ಧವೇ ಆಗಿದೆ. ಮತ್ತು ಕುದುರೆಗಳು ರಥವನ್ನು ತಮ್ಮ ಇಚ್ಛಾನುಸಾರ ಎಳೆದುಕೊಂಡು ಹೋಗುತ್ತವೆ. ಇದರಂತೆಯೇ ಇಂದ್ರಿಯಗಳೂ ಸಹ ಸ್ಥೂಲದೇಹವನ್ನು ತಮ್ಮ

ಇಚ್ಛಾನುಸಾರ ಎಳೆದಾಡುತ್ತವೆ ಆದುದರಿಂದ ದೇಹಕ್ಕಿಂತಲೂ ಇಂದ್ರಿಯಗಳು ಬಲವುಳ್ಳವುಗಳೂ, ಇಂದ್ರಿಯಗಳ ದೃಷ್ಟಿಯಿಂದ ಚೇತನವುಳ್ಳವುಗಳೂ ಆಗಿವೆ ಮತ್ತೊಂದು ವಿಷಯ ಸ್ಥೂಲ ಶರೀರವನ್ನು ಕಣ್ಣಿನಿಂದ ನೋಡಲಾಗುತ್ತದೆ, ಇಂದ್ರಿಯಗಳನ್ನು ಕಣ್ಣಿನಿಂದ ನೋಡಲಾಗುವುದಿಲ್ಲವಾದುದರಿಂದ ಇಂದ್ರಿಯಗಳು ಸ್ಥೂಲ ಶರೀರಕ್ಕಿಂತ ಸೂಕ್ಷ್ಮಗಳಾಗಿವೆ ಇದಲ್ಲದೆ ಸ್ಥೂಲ ಶರೀರಕ್ಕಿಂತ ಇಂದ್ರಿಯಗಳ ಶ್ರೇಷ್ಠತ್ವವೂ ಸೂಕ್ಷ್ಮತ್ವವೂ ಬಲವತ್ತರವಾಗಿಯೂ ಮನಸ್ಸು ಪ್ರತ್ಯಕ್ಷವಾಗಿಯೂ ಕಂಡುಬರುತ್ತದೆ

ಪ್ರಶ್ನೆ : ಕಠೋಪನಿಷತ್ತಿನಲ್ಲಿ ಇಂದ್ರಿಯಗಳಿಗಿಂತ ಅರ್ಥವು ಪರ, ಅರ್ಥಕ್ಕಿಂತ ಮನಸ್ಸು ಪರ, ಮನಸ್ಸಿಗಿಂತ ಬುದ್ಧಿಯು ಪರ, ಬುದ್ಧಿಗಿಂತ ಮಹತ್ತತ್ವವು ಪರ, ಸಮಷ್ಟಿ ಬುದ್ಧಿರೂಪ ಮಹತ್ತತ್ವಕ್ಕಿಂತ ಅವ್ಯಕ್ತವು ಪರ, ಅವ್ಯಕ್ತಕ್ಕಿಂತ ಪುರುಷನು ಪರ, ಈ ಪುರುಷನಿಗಿಂತ ಪರ ಅಂದರೆ ಶ್ರೇಷ್ಠವೂ ಮತ್ತು ಸೂಕ್ಷ್ಮವಾದುದೂ ಮತ್ತೊಂದಿಲ್ಲ ಇದೇ ಎಲ್ಲದರ ಕೊನೆಯ ಸೀಮೆ, ಇದೇ ಪರಮಗತಿ ಎಂದು ಹೇಳಿದೆ ಪರಂತು ಇಲ್ಲಿ ಅರ್ಥ, ಮಹತ್ತತ್ವ, ಅವ್ಯಕ್ತವನ್ನು ಬಿಟ್ಟು ಉಳಿದವುಗಳನ್ನು ಹೇಳಿದೆ ಇದಕ್ಕೆ ಕಾರಣವೇನು ?

ಉತ್ತರ : ಶ್ರೀ ಕೃಷ್ಣನು ಇಲ್ಲಿ ಪ್ರಕರಣದ ವಿವರಣೆಯನ್ನು ಸಾರರೂಪದಿಂದ ಮಾಡಿರುತ್ತಾನೆ ಈ ಕಾರಣದಿಂದ ಮಧ್ಯದಲ್ಲಿರುವ ಮೂರು ವಸ್ತುಗಳ ಹೆಸರನ್ನು ತೆಗೆದುಕೊಂಡಿಲ್ಲ ಯಾಕೆಂದರೆ ಕಾಮನ ನಾಶಕ್ಕಾಗಿ ಅರ್ಥ, ಮಹತ್ತತ್ವ ಮತ್ತು ಅವ್ಯಕ್ತಗಳ ಶ್ರೇಷ್ಠತೆಯನ್ನು ಹೇಳಬೇಕಾದ ಅಗತ್ಯವಿಲ್ಲ. ಇಲ್ಲಿ ಕೇವಲ ಆತ್ಮನ ಮಹತ್ವವೇ ಮುಖ್ಯವಾದುದು ಆತ್ಮನ ಆಶ್ರಯದಿಂದಲೇ ಕಾಮವನ್ನು ಗೆಲ್ಲಬೇಕು.

ಪ್ರಶ್ನೆ . ಕಠೋಪನಿಷತ್ತಿನಲ್ಲಿ ಇಂದ್ರಿಯಗಳಿಗಿಂತ ಅರ್ಥವು ಶ್ರೇಷ್ಠವೆಂದು ಹೇಳಿದ ಕಾರಣವೇನು ?

ಉತ್ತರ . ಅಲ್ಲಿ 'ಅರ್ಥ'ವೆಂದರೆ ಪಂಚತನ್ಮಾತ್ರೆಗಳು. ತನ್ಮಾತ್ರೆಗಳು ಇಂದ್ರಿಯಗಳಿಗಿಂತ ಸೂಕ್ಷ್ಮವೆಂಬುದು ಸರ್ವವಿದಿತವೇ ಆದುದರಿಂದ ಅವುಗಳಿಗ ' ಪರ 'ವೆಂದು ಹೇಳಿರುವುದು ಅರ್ಥಗರ್ಭಿತವಾಗಿದೆ.

ಪ್ರಶ್ನೆ : ಇಲ್ಲಿ ಶ್ರೀಕೃಷ್ಣನು ಇಂದ್ರಿಯಗಳಿಗಿಂತ ಮನಸ್ಸು, ಮನಸ್ಸಿಗಿಂತ ಬುದ್ಧಿಯು ಪರ ಅಂದರೆ ಶ್ರೇಷ್ಠ, ಸೂಕ್ಷ್ಮ ಮತ್ತು ಬಲವಂತ ಎಂದು

ಹೇಳಿದ್ದಾನೆ ಕಿಂತು ಎರಡನೆಯ ಅಧ್ಯಾಯದಲ್ಲಿ ಯತ್ನ ಮಾಡುವ ಬುದ್ಧಿವಂತನಾದ ಪುರುಷನ ಮನಸ್ಸನ್ನು ಸಹ ಪ್ರಮಥಶೀಲವಾದ ಇಂದ್ರಿಯಗಳು ಬಲಾತ್ಕಾರದಿಂದ ಸೆಳೆದುಕೊಳ್ಳುತ್ತವೆ ಇದಲ್ಲದೆ "ವಿಷಯಗಳಲ್ಲಿ ವಿಚಾರಿಸುವ ಇಂದ್ರಿಯಗಳಲ್ಲಿ ಯಾವುದರ ಜೊತೆಗೆ ಮನಸ್ಸು ಸೇರುತ್ತದೆಯೋ ಆ ಒಂದು ಇಂದ್ರಿಯವೇ ಮನುಷ್ಯನ ಬುದ್ಧಿಯನ್ನು ಹರಿಸುತ್ತದೆ" ಎಂದು ಹೇಳಿದೆ ಈ ಮೇಲಿನ ವಚನಗಳಿಂದ ಮನಸ್ಸಿಗಿಂತಲೂ ಇಂದ್ರಿಯಗಳು ಬಲವುಳ್ಳವುಗಳೆಂದು ಸಿದ್ಧವಾಗುತ್ತದೆ ಮತ್ತು ಬುದ್ಧಿಗಿಂತ ಮನಸ್ಸಿನ ಸಹಾಯವನ್ನು ಪಡೆದ ಇಂದ್ರಿಯಗಳು ಬಲಯುತವೆಂದು ತೋರುತ್ತದೆ. ನೋಡಿದರೆ ಪೂರ್ವಾಪರ ವಿರೋಧವೆಂದು ತೋರುತ್ತದೆ ಇದಕ್ಕೆ ಸಮಾಧಾನವೇನು ?

ಉತ್ತರ ಕಠೋಪನಿಷತ್ತಿನಲ್ಲಿ –

**ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವಚ ।**
**ಬುದ್ಧಿಂತು ಸಾರಥಿಂ ವಿದ್ಧಿ ಮನಃ ಪ್ರಗ್ರಹ ಮೇವಚ ॥**
**ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ ।**
**ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥**

ಈ ದೃಷ್ಟಾಂತಕ್ಕೆ ಅರ್ಥ . ಆತ್ಮನು ರಥಿಕನು, ಬುದ್ಧಿಯು ಅವನ ಸಾರಥಿ, ಶರೀರ ರಥ, ಮನಸ್ಸು ಲಗಾಮು, ಇಂದ್ರಿಯಗಳು ಕುದುರೆಗಳು, ಶಬ್ದಾದಿ ವಿಷಯಗಳೇ ಮಾರ್ಗ ಎಂದು ಹೇಳಿದೆ ವಾಸ್ತವದಲ್ಲಿ ರಥಿಕನ ಅಧೀನದಲ್ಲಿ ಸಾರಥಿ, ಸಾರಥಿಯ ಅಧೀನದಲ್ಲಿ ಲಗಾಮು, ಮತ್ತು ಲಗಾಮಿನ ಅಧೀನದಲ್ಲಿ ಕುದುರೆಗಳು ಇರುವುದು ಸರಿಯಾಗಿದ್ದರೂ, ಯಾವನ ಬುದ್ಧಿರೂಪ ಸಾರಥಿಯು ಸರ್ವಥಾ ವಿವೇಕ ಜ್ಞಾನದಿಂದ ಶೂನ್ಯನಾಗಿದ್ದರೆ, ಮನರೂಪ ಲಗಾಮು ನಿಯಮಾನುಸಾರ ಅಧೀನದಲ್ಲಿ ಇಲ್ಲದಿದ್ದರೆ ಇಂಥಾ ಜೀವಾತ್ಮರೂಪ ರಥಿಕನ ಇಂದ್ರಿಯರೂಪ ಕುದುರೆಗಳು ಸ್ವೇಚ್ಛಾಚಾರಿಯಾಗಿ ಕೆಟ್ಟ ಕುದುರೆಗಳಂತೆ ಬಲಾತ್ಕಾರವಾಗಿ ವಿಷಯ ಮಾರ್ಗದಲ್ಲಿ ರಥವನ್ನು ಎಳೆದುಕೊಂಡು ಹೋಗಿ ಗುಂಡಿಯಲ್ಲಿ ಹಾಕುತ್ತವೆ. ಇದರಿಂದ ಸಿದ್ಧವಾಗುವು

ದೇನೆಂದರೆ – ಎಲ್ಲಿಯವರೆಗೆ ಬುದ್ಧಿ, ಮನಸ್ಸು ಮತ್ತು ಇಂದ್ರಿಯಗಳ ಮೇಲೆ ಜೀವಾತ್ಮನ ಅಧಿಪತ್ಯವಿಲ್ಲವೋ ಅವನು ತನ್ನ ಸಹಜ ಸಾಮರ್ಥ್ಯವನ್ನು ಮರೆತು ಅವುಗಳಿಗೆ ಅಧೀನನಾಗಿರುವವರೆಗೆ ಇಂದ್ರಿಯ, ಮನಸ್ಸು ಮತ್ತು ಬುದ್ಧಿಗಳಿಗೆ ಮೋಸವನ್ನು ಮಾಡಿ ಎಲ್ಲವನ್ನು ಬಲಾತ್ಕಾರದಿಂದ ಎಳೆದುಕೊಂಡು ಕೆಟ್ಟ ಮಾರ್ಗದಲ್ಲಿ ಸೆಳೆದುಕೊಂಡು ಹೋಗಿರುತ್ತವೆ. ಅಂದರೆ ಇಂದ್ರಿಯಗಳು ಮೊದಲು ಮನಸ್ಸಿಗೆ ವಿಷಯ ಸುಖದ ಆಶೆಯನ್ನು ತೋರಿಸಿ ತಮ್ಮ ಸ್ವಾಧೀನ ಮಾಡಿಕೊಳ್ಳುತ್ತವೆ ನಂತರ ಮನಸ್ಸು ಮತ್ತು ಇಂದ್ರಿಯಗಳು ಸೇರಿ ಬುದ್ಧಿಯನ್ನು ತಮಗೆ ಅನುಕೂಲವಾಗುವಂತೆ ಮಾಡಿಕೊಳ್ಳುತ್ತವೆ ನಂತರ ಈ ಎಲ್ಲವೂ ಸೇರಿ ಆತ್ಮನನ್ನೂ ಸಹ ಸ್ಮೃತಿ ತಪ್ಪಿಸಿ ತಮ್ಮ ಅಧೀನ ಮಾಡಿಕೊಳ್ಳುತ್ತವೆ. ಪರಂತು ವಾಸ್ತವದಲ್ಲಿ ಇಂದ್ರಿಯಗಳಿಗಿಂತ ಮನಸ್ಸು, ಮನಸ್ಸಿಗಿಂತ ಬುದ್ಧಿ, ಮತ್ತು ಎಲ್ಲಕ್ಕಿಂತ ಆತ್ಮನೇ ಬಲವುಳ್ಳವನು ಆದುದರಿಂದ ಕಠೋಪನಿಷತ್ತಿನಲ್ಲಿ ಯಾರ ಈ ಬುದ್ಧಿರೂಪ ಸಾರಥಿಯು ವಿವೇಕಿಯಾಗಿರುವನೋ, ಮನರೂಪ ಲಗಾಮು ಯಾರ ನಿಯಮಾನುಸಾರವಾಗಿ ತನ್ನ ಅಧೀನದಲ್ಲಿ ಇರುವುದೋ, ಅವನ ಇಂದ್ರಿಯರೂಪ ಕುದುರೆಗಳು ಉತ್ತಮ ಕುದುರೆಗಳಂತೆ ವಶದಲ್ಲಿ ಇರುವುವೋ ಇಂಥಾ ಮನಸ್ಸು, ಬುದ್ಧಿ, ಇಂದ್ರಿಯಗಳುಳ್ಳವನು ಪರಮಾತ್ಮನ ಪದವನ್ನು ಪ್ರಾಪ್ತಿಮಾಡಿಕೊಳ್ಳುತ್ತಾನೆ ಎಂದು ಹೇಳಿದೆ. ಆಗ ಮನುಷ್ಯನಿಗೆ ಪುನರ್ಜನ್ಮವಿಲ್ಲ ಇದೇ ವಿಷಯವನ್ನು ಮುಂದೆ ಆರನೆಯ ಅಧ್ಯಾಯದಲ್ಲಿ ಗೆಲ್ಲಲ್ಪಟ್ಟ ಮನ, ಬುದ್ಧಿ, ಇಂದ್ರಿಯಗಳುಳ್ಳವನು ತನಗೆ ತಾನು ಮಿತ್ರನೆಂತಲೂ, ಗೆಲ್ಲಲ್ಪಡದಿದ್ದರೆ ತನಗೆ ತಾನು ಶತ್ರುವೆಂತಲೂ ಹೇಳಿದೆ ಅತಃ ಗೆದಿಯದೆ ಇದ್ದ ಇಂದ್ರಿಯಗಳು ವಾಸ್ತವವಾಗಿ ದುರ್ಬಲವಾಗಿದ್ದರೂ ಪ್ರಬಲವಾದವುಗಳಂತೆ ತೋರುತ್ತವೆ. ಈ ಆಶಯದಿಂದಲೇ ಎರಡನೆಯ ಅಧ್ಯಾಯದಲ್ಲಿ ಹಾಗೆ ಹೇಳಿದೆ ಇಲ್ಲಿಯಾದರೋ ಅವುಗಳ ವಾಸ್ತವ ಸ್ವರೂಪವನ್ನು ಹೇಳಿದೆ. ಈಗ ಪೂರ್ವಾಪರ ವಿರೋಧವಿಲ್ಲವೆಂದು ಸ್ಪಷ್ಟವಾಗುತ್ತದೆ

ಪ್ರಶ್ನೆ · ಇಲ್ಲಿ "ಪರತಃ" ಪದದ ಅರ್ಥ "ಅತ್ಯಂತ ಪರ" ಎಂದು ಮಾಡಲ್ಪಟ್ಟಿದೆ. ಇದರ ಭಾವವೇನು ?

ಉತ್ತರ . ಕಠೋಪನಿಷತ್ತಿನಲ್ಲಿ ಈ ವಿಷಯವನ್ನು ಪ್ರತಿಪಾದಿಸಿದೆ. ಅಲ್ಲಿ ಬುದ್ಧಿಗಿಂತ ಮಹತ್ತತ್ವವು ಪರವೆಂತಲೂ, ಅದಕ್ಕಿಂತ ಪರ ಅವ್ಯಕ್ತವೆಂತಲೂ, ಅವ್ಯಕ್ತಕ್ಕಿಂತ ಪುರುಷನು ಪರನೆಂದೂ ಹೇಳಿದೆ. ಅಲ್ಲದೆ ಇದೇ ಪರಾಕಾಷ್ಟ ವಾಗಿದೆ ಎಂದು ಹೇಳಿದೆ; ಅಂದರೆ ಪರತತ್ವದ ಅಂತಿಮ ಅವಧಿಯಾಗಿದೆ ಇದಕ್ಕಿಂತ ಪರವಾದುದು ಇಲ್ಲವೇ ಇಲ್ಲ. ಈ ಶೃತಿಯ ಭಾವವನ್ನು ಪ್ರಕಟ ಮಾಡುವುದಕ್ಕಾಗಿ ಇಲ್ಲಿ "ಪರತಃ" ಅಂದರೆ ಅತ್ಯಂತ ಪರವೆಂದು ಅರ್ಥವಾಗುತ್ತದೆ ಆತ್ಮನೇ ಸರ್ವಾಧಾರ, ಸರ್ವಾಧಿಷ್ಠಾನ, ಸರ್ವಪ್ರಕಾಶಕ ಮತ್ತು ಸರ್ವಪ್ರೇರಕ. ಅತಿಸೂಕ್ಷ್ಮ ಅಂದರೆ ನಿರ್ಗುಣ ಅಸ್ತಿ, ಭಾತಿ, ಪ್ರಿಯ ರೂಪದಿಂದ ಸರ್ವವ್ಯಾಪಕನಾದುದರಿಂದ ಅವನನ್ನು "ಅತ್ಯಂತ ಪರ" ಎಂದು ಹೇಳಿದ್ದು ಸರಿಯಾಗಿದೆ

ಪ್ರಶ್ನೆ ಈಗ ನಡೆಯುವುದು "ಕಾಮ"ದ ಪ್ರಕರಣ. ಮುಂದಿನ ಶ್ಲೋಕ ದಲ್ಲಿಯೂ 'ಕಾಮ'ವನ್ನು ನಾಶಮಾಡಲು ಹೇಳಿದೆ. ಅಂದ ಮೇಲೆ ಈ ಶ್ಲೋಕದಲ್ಲಿ ಬಂದಿರುವ "ಸಃ" ಎಂಬ ಪದವು "ಕಾಮ"ದ ವಾಚಕವೆಂದು ತಿಳಿ ದರೆ ತಪ್ಪಾಗುತ್ತದೆಯೇ ?

ಉತ್ತರ ಈಗ ನಡೆಯುವುದು 'ಕಾಮ'ವನ್ನು ಕೊಲ್ಲುವ ಪ್ರಕರಣ ವೆಂಬುದರಲ್ಲಿ ಸಂಶಯವಿಲ್ಲ. ಆದರೆ 'ಕಾಮ'ವನ್ನು ಶ್ರೇಷ್ಠವೆಂದು ತೋರಿ ಸುವ ಪ್ರಕರಣವಲ್ಲ. 'ಕಾಮ'ವನ್ನು ಕೊಲ್ಲುವ ಶಕ್ತಿಯು ಆತ್ಮನಲ್ಲಿ ಸಹಜ ವಾಗಿದೆ. ಮನುಷ್ಯನು ತನ್ನ ಆತ್ಮಬಲವನ್ನು ತಿಳಿದದ್ದಾದರೆ ಬುದ್ಧಿ, ಮನಸ್ಸು, ಇಂದ್ರಿಯಗಳ ಮೇಲೆ ಸಹಜವಾಗಿಯೇ ತನ್ನ ಪೂರ್ಣ ಅಧಿಕಾರ ವನ್ನು ಸ್ಥಾಪಿಸಿ 'ಕಾಮ'ವನ್ನು ಅಸ್ತಿತ್ವವಿಲ್ಲದಂತೆ ಮಾಡಬಹುದು ಈ ಶ್ಲೋಕವು ಇದನ್ನೇ ಪ್ರತಿಪಾದಿಸುತ್ತದೆ. ಒಂದು ವೇಳೆ ಇಂದ್ರಿಯ, ಮನಸ್ಸು, ಬುದ್ಧಿಗಳಿಗಿಂತ 'ಕಾಮ'ವು ಅತ್ಯಂತ ಶ್ರೇಷ್ಠನೆಂದು ಒಪ್ಪಿದರೆ ಅವು ಗಳಿಂದ 'ಕಾಮ'ವನ್ನು ನಾಶಮಾಡು ಎಂದು ಹೇಳುವ ಪ್ರಸಂಗವೇ ಬರುವು ದಿಲ್ಲ ಇದಲ್ಲದೆ "ಸಃ" ಎಂಬ ಪದಕ್ಕೆ 'ಕಾಮ'ವೆಂದು ಅರ್ಥ ಮಾಡುವುದು ಕಠೋಪನಿಷತ್ತಿಗೂ ವಿರುದ್ಧವಾಗಿದೆ ಆದುದರಿಂದ 'ಸಃ' ಪದವು ಕಾಮದ ವಾಚಕವಲ್ಲ. ಎರಡನೇ ಅಧ್ಯಾಯದಲ್ಲಿ ಇದನ್ನು ಲಕ್ಷ್ಯ ಮಾಡಿ "ರಸೋ

ಪ್ಯಸ್ಯ ಪರಂದೃಷ್ಟ್ವಾ ನಿವರ್ತತೆ" ಎಂಬಂತೆ 'ಸಃ' ಪದವು ಪರತತ್ವ ಅಂದರೆ ನಿತ್ಯ, ಶುದ್ಧ, ಬುದ್ಧ, ಮುಕ್ತನಾದ ಆತ್ಮನ ವಾಚಕವಾಗಿದೆ.

ಸಂಬಂಧ ಮುಂದಿನ ಶ್ಲೋಕದಲ್ಲಿ ಹಿಂದೆ ವರ್ಣಿಸಿದಂತೆ ಆತ್ಮನನ್ನು ತಿಳಿದು ಕಾಮುವನ್ನು ಜಯಿಸು ಎಂದು ಪ್ರತಿಪಾದಿಸಲ್ಪಡುತ್ತದೆ.

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥ ೪೩ ॥**

ತಾತ್ಪರ್ಯ : ಎಲೈ ಅರ್ಜುನಾ ! ಈ ಪ್ರಕಾರವಾಗಿ ಬುದ್ಧಿಗಿಂತ ಹೆಚ್ಚಿನದನ್ನು ತಿಳಿದುಕೊಂಡು, ಬುದ್ಧಿಯಿಂದ ಮನಸ್ಸನ್ನು ನಿಲ್ಲಿಸಿ, ಕಾಮ ರೂಪವೂ ದುರ್ಜಯವೂ ಆದ ಶತೃವನ್ನು ನಾಶಮಾಡು

**ವಿವರಣೆ**

ಪ್ರಶ್ನೆ . ಇಲ್ಲಿ ಬುದ್ಧಿಯಿಂದ ಪರವಾದ ಆತ್ಮನನ್ನು ತಿಳಿದು ಕಾಮ ನನ್ನು ಕೊಲ್ಲು ಎಂದು ಹೇಳುವುದರ ಭಾವವೇನು ?

ಉತ್ತರ : ಗೀತೆಯು "ಅಜ್ಞಾನೇ ನಾವೃತಂಜ್ಞಾನಂ" ಎಂದು ಹೇಳು ವಂತೆ ಮನುಷ್ಯರ ಜ್ಞಾನವು ಅನಾದಿಕಾಲದಿಂದ ಅಜ್ಞಾನ ದ್ವಾರಾ ಆವೃತ ವಾಗಿದೆ. ಈ ಕಾರಣದಿಂದ ಮನುಷ್ಯನು ತನ್ನನ್ನು ತಾನು ಮರೆತು ತಾನಲ್ಲದ ಅನಾತ್ಮ ಪದಾರ್ಥಗಳಲ್ಲಿ ತಾನೆಂದು ಭ್ರಾಂತಿಪಟ್ಟಿರುತ್ತಾನೆ ಅನಂತ ಶಕ್ತಿ ಯುಳ್ಳವನೂ, ಸರ್ವನಾಮ ರೂಪಗಳನ್ನು ಸಹಜವಾಗಿ ಧರಿಸಿ ಭರಿಸುವವ ನಾದರೂ, ಅಸ್ತಿತ್ವವಿಲ್ಲದೆ ತೋರುವ ಕಲ್ಪಿತ ಕಾಮವೆಂಬ ವೈರಿಗೆ ವಶವಾಗಿ ದ್ದಾನೆ ಲೋಕಾನುಭವದಿಂದಲೂ ಮತ್ತು ಶಾಸ್ತ್ರಗಳಿಂದಲೂ ತಿಳಿದೂ ಸಹ ತನ್ನನ್ನು ತ್ರಿಮೂರ್ತಿಗಳಿಗಿಂತಲೂ ಶ್ರೇಷ್ಠನೆಂದು ತಿಳಿಯಲಾರದೆ ಹೋಗಿ ದ್ದಾನೆ. ತನ್ನ ಸ್ವರೂಪನಾದ ಆತ್ಮನನ್ನು ಇದ್ದಕ್ಕಿದ್ದಂತೆ ತಿಳಿದರೆ ರಾಗ ರೂಪ ಕಾಮವನ್ನು ಸಹಜವಾಗಿಯೇ ನಾಶಮಾಡಬಹುದು ಅತಏವ ಸರ್ವಾನರ್ಥಕಾರಿಯಾದ ಕಾಮವನ್ನು ಗೆಲ್ಲಲು ಆತ್ಮಜ್ಞಾನವೇ ಸರ್ವಶ್ರೇಷ್ಠ ವಾದ ಸಾಧನ. ಆತ್ಮಜ್ಞಾನವಿಲ್ಲದಲ್ಲಿಯೇ ಕಾಮವು ಜೀವಿಸಬಲ್ಲದು. ಬೆಳ

ಕಿಲ್ಲದ ಕತ್ತಲಲ್ಲಿಯೇ ದೆವ್ವದ ಆಟ ಈ ಕಾರಣದಿಂದ ಈ ಶ್ಲೋಕದಲ್ಲಿ ಬುದ್ಧಿಗಿಂತಲೂ ಅತೀತವಾದ ಬುದ್ಧಿಯ ಭಾವಾಭಾವಗಳನ್ನು ನಿರ್ವಿಕಾರ ದಿಂದಿದ್ದು ಅರಿಯುವ, ಇದಲ್ಲದೆ ಬುದ್ಧಿಗೆ ನಿಶ್ಚಯ ಮಾಡುವ ಶಕ್ತಿಯನ್ನು ದಯಪಾಲಿಸಿರುವ ಆತ್ಮನನ್ನು ತಿಳಿದು ಕಾಮವನ್ನು ಜಯಿಸೆಂದು ಹೇಳಿದೆ. ಆತ್ಮವು ನಿರ್ಗುಣವಾದುದರಿಂದ ಅತಿಗೂಢವಾಗಿದೆ. ಮಹಾತ್ಮರು ತಿಳಿಸಿದ ಮೇಲೆ ಯಾವನಾದರೊಬ್ಬ ಅಧಿಕಾರಿಯಾದವನು ಮಾತ್ರ ಅದನ್ನು ಸಂಶಯ, ವಿಪರ್ಯಗಳೆಂಬ ದೋಷಗಳನ್ನು ಕಳೆದುಕೊಂಡು ತಿಳಿದುಕೊಳ್ಳಬಲ್ಲನು. ಇದೇ ವಿಷಯವನ್ನು ಕಠೋಪನಿಷತ್ತಿನಲ್ಲಿ –

**ಏಷ ಸರ್ವೇಷು ಭೂತೇಷು ಗೂಢೋತ್ಮಾ ನ ಪ್ರಕಾಶತೆ |**
**ದೃಶ್ಯತೆ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ||**

ಎಂದು ಹೇಳಿದೆ. ಇದರ ಅರ್ಥ : ಸರ್ವಭೂತಗಳಲ್ಲಿ ಅಡಗಿರುವ ಈ ಆತ್ಮನು ಎಲ್ಲರಿಗೂ ಕಾಣುವುದಿಲ್ಲ ಕೇವಲ ಸೂಕ್ಷ್ಮದರ್ಶಿಗಳಾದ ಪುರುಷರೇ ಅತ್ಯಂತ ತೀಕ್ಷ್ಣವೂ, ಸೂಕ್ಷ್ಮವೂ ಆದ ಬುದ್ಧಿಯಿಂದ ಕಂಡುಕೊಳ್ಳುತ್ತಾರೆ.

ಪ್ರಶ್ನೆ. ಇಲ್ಲಿ "ಆತ್ಮಾನಮ್" ಎಂಬ ಪದದ ಅರ್ಥವನ್ನು ಮನಸ್ಸೆಂತಲೂ 'ಆತ್ಮಾನಾಂ' ಎಂಬ ಪದದ ಅರ್ಥವು ಬದ್ಧಿಯೆಂತಲೂ ಹೇಳುವ ಕಾರಣವೇನು ?

ಉತ್ತರ . ಗೀತೆಯಲ್ಲಿ ಪ್ರಸಂಗಾನುಸಾರ ಶರೀರ, ಇಂದ್ರಿಯ, ಮನ, ಬುದ್ಧಿ ಮತ್ತು ಜೀವ – ಈ ಎಲ್ಲವುಗಳನ್ನು ಆತ್ಮನೆಂದು ಹೇಳಿದೆ ಇವುಗಳಲ್ಲಿ ನಲುವತ್ತೊಂದನೆಯ ಶ್ಲೋಕದಲ್ಲಿ ಸರ್ವತ್ರ ಇಂದ್ರಿಯಗಳನ್ನು ವಶಮಾಡಿ ಕೊಳ್ಳುವುದಕ್ಕಾಗಿ ಹೇಳಿದ್ದಾಗಿದೆ. ಶರೀರವು ಇಂದ್ರಿಯಾಂತರ್ಗತವೆಂದು ಮತ್ತೆ ಹೇಳಬೇಕಾಗಿಲ್ಲ ಜೀವಾತ್ಮ ಸ್ವಯಂ ವಶಪಡಿಸಿಕೊಳ್ಳುವವನು. ಇನ್ನು ಉಳಿದವುಗಳು ಮನ, ಬುದ್ಧಿ , ಬುದ್ಧಿಯು ಮನಸ್ಸಿಗಿಂತ ಬಲವಂತ ವೆಂದು ಹೇಳಿದ್ದಾಗಿದೆ. ಅತಃ ಬುದ್ಧಿಯ ದ್ವಾರಾ ಮನಸ್ಸನ್ನು ವಶಮಾಡಿ ಕೊಳ್ಳಲಾಗುತ್ತದೆ. ಈ ಕಾರಣದಿಂದ 'ಆತ್ಮಾನಮ್' ಅಂದರೆ ಮನ ಸ್ಸೆಂತಲೂ, 'ಆತ್ಮಾನಾಂ' ಅಂದರೆ ಬುದ್ಧಿಯೆಂತಲೂ ಹೇಳಿದೆ.

ಪ್ರಶ್ನೆ · ಬುದ್ಧಿ ದ್ವಾರಾ ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳಬೇಕು ಎಂಬ ಭಾವವೇನು ?

ಉತ್ತರ . ಆರನೆಯ ಅಧ್ಯಾಯದಲ್ಲಿ ಮನಸ್ಸನ್ನು ವಶಮಾಡಿಕೊಳ್ಳಲು ಅಭ್ಯಾಸ, ವೈರಾಗ್ಯವೆಂದು ಎರಡು ಉಪಾಯಗಳನ್ನು ಹೇಳಿದೆ ಪ್ರತ್ಯೇಕ ಇಂದ್ರಿಯಗಳ ವಿಷಯದಲ್ಲಿ ರಾಗ–ದ್ವೇಷಗಳಂತೂ ಇದ್ದೇ ಇರುತ್ತವೆ ಇದು ಸ್ವಾಭಾವಿಕ ವಿಷಯಗಳೊಂದಿಗೆ ಇಂದ್ರಿಯಗಳು ಸಂಬಂಧವಾಗುವಾಗ, ರಾಗ–ದ್ವೇಷಗಳ ಪ್ರಸಂಗ ಬಂದಾಗ, ಬಹಳ ಹುಷಾರಿಯಿಂದ ಇದ್ದು ಬುದ್ಧಿಯಿಂದ ವಿಚಾರ ಮಾಡಿ ರಾಗ–ದ್ವೇಷಗಳಿಗೆ ವಶನಾಗಬಾರದು ಅಂದರೆ ರಾಗ ದ್ವೇಷಗಳು ಅಂತಃಕರಣಗಳ ಧರ್ಮ ಆತ್ಮನು ಅಂತಃಕರಣಕ್ಕೆ ಸಾಕ್ಷಿಯಾದುದರಿಂದ ಆತ್ಮನಿಗೂ ರಾಗ–ದ್ವೇಷಗಳಿಗೂ ಯಾವ ಸಂಬಂಧವೂ ಇಲ್ಲವೆಂದು ವಿವೇಕಯುಕ್ತ ಬದ್ಧಿಯಿಂದ ತಿಳಿಯಬೇಕು. ಇದೇ ಬುದ್ಧಿಯಿಂದ ಮನಸ್ಸನ್ನು ಗೆದಿಯುವುದೆಂಬುದರ ಅರ್ಥ ರಾಗ–ದ್ವೇಷಗಳನ್ನು ನೋಡುವವನೇ ರಾಗ–ದ್ವೇಷಗಳನ್ನು ಗೆದಿಯಬಲ್ಲನು

ಪ್ರಶ್ನೆ ವೈರಾಗ್ಯವೆಂದರೇನು ?

ಉತ್ತರ . ಬುದ್ಧಿಯಿಂದ ವಿಚಾರ ಮಾಡಿ ಇಂದ್ರಿಯಗಳ ಭೋಗಗಳಲ್ಲಿ ದುಃಖ ಮತ್ತು ದೋಷಗಳನ್ನು ಪುನಃ ಪುನಃ ದರ್ಶನ ಮಾಡಿದರೆ ಮನಸ್ಸಿಗೆ ವಿಷಯಗಳಲ್ಲಿ ಅರುಚಿಯುಂಟಾಗುವುದೇ ವೈರಾಗ್ಯ. ಮತ್ತು ವ್ಯವಹಾರ ಕಾಲದಲ್ಲಿ ಸ್ವಾರ್ಥವನ್ನು ತ್ಯಜಿಸುವುದು, ಅನುಸಂಧಾನ ಕಾಲದಲ್ಲಿ ಮನಸ್ಸನ್ನು ಬ್ರಹ್ಮಾಕಾರವಾಗಿ ಮಾಡುವುದೂ ವೈರಾಗ್ಯವೇ. ಮನಸ್ಸು ಬ್ರಹ್ಮಾಕಾರವಾದರೆ ಮೋಕ್ಷ, ಮನಸ್ಸು ವಿಷಯಾಕಾರವಾದರೆ ಬಂಧ ಎಂದು ತಿಳಿಯಬೇಕು

ಪ್ರಶ್ನೆ : ಆತ್ಮನು ಸ್ವಯಂ ಬಲವಂತನಾಗಿರುವ ಪಕ್ಷದಲ್ಲಿ ಬುದ್ಧಿಯ ಆಶ್ರಯದಿಂದ ಮನಸ್ಸನ್ನು ವಶಮಾಡಿಕೊಂಡು ಕಾಮನನ್ನು ಗೆಲ್ಲು ಎಂದು ಹೇಳುವ ಕಾರಣವೇನು ? ಆತ್ಮನಲ್ಲಿ ಸ್ವಯಂ ಕಾಮನನ್ನು ಕೊಲ್ಲುವ ಶಕ್ತಿ ಇರುವುದಿಲ್ಲವೆ ?

ಉತ್ತರ · ಆತ್ಮನಲ್ಲಿ ಸ್ವಯಂ ಅಪಾರವಾದ ಶಕ್ತಿ ಇದ್ದೇ ಇದೆ. ಅಧಿಷ್ಠಾನ ವಸ್ತುವಿನಲ್ಲಿ ಅಧ್ಯಸ್ಥವನ್ನು ಧರಿಸುವ ಶಕ್ತಿಯಿಲ್ಲವೇ ? ಸರ್ವ ಅಧ್ಯಸ್ಥ ಪದಾರ್ಥಗಳ ಉತ್ಪತ್ತಿ ನಾಶಕ್ಕೆ ಅಧಿಷ್ಠಾನವಾದ ಆತ್ಮನೇ ಕಾರಣ. ಹೀಗಿರುವಾಗ ಕಾಮ ಒಂದರ ವಿಷಯ ಹೇಳಬೇಕಾಗಿಲ್ಲ. ಆತ್ಮನು ಸ್ವತಃ ಕಾಮವನ್ನು ಕೊಲ್ಲಬಲ್ಲನು. ನಿಜವಾಗಿ ನೋಡಿದರೆ ಆತ್ಮಬಲವನ್ನು ಪಡೆದು ಸರ್ವ ಪದಾರ್ಥಗಳು ಬಲವಂತವಾಗಿಯೇ ಇವೆ. ಸರ್ವ ವಸ್ತುಗಳಲ್ಲಿರುವ ಬಲವೂ ಆತ್ಮಬಲವೇ ಮತ್ತು ಜಡ ಪದಾರ್ಥಗಳೆಲ್ಲ ಆತ್ಮನಿಂದಲೇ ಕ್ರಿಯಾಶೀಲವಾಗಿರುತ್ತವೆ. ಆದರೆ ಮಾಡುವುದೇನು ? ಆತ್ಮನು ಅಜ್ಞಾನದಿಂದ ತನ್ನ ಬಲವನ್ನು ಮರೆತಿರುತ್ತಾನೆ ಬಲವಂತ ಚಕ್ರವರ್ತಿಯು ಸ್ವಪ್ನದಲ್ಲಿ ತನ್ನ ಶಕ್ತಿಯನ್ನು ಮರೆತು ಭಿಕ್ಷಗಾರನಾದಂತೆ, ಅಂದರೆ ತನ್ನನ್ನು ಮರೆತು ತನ್ನ ಸೇವಕರಿಗೆ ಅಂದರೆ ತನಗಿಂತ ಕೀಳಾದವರ ಅಧೀನನಾದಂತೆ, ಆತ್ಮನೂ ಸಹ ತನ್ನನ್ನು ತನಗಿಂತ ಕೀಳಾದ ಮನ, ಬುದ್ಧಿ ಮತ್ತು ಇಂದ್ರಿಯಗಳ ಅಧೀನನೆಂದು ತಿಳಿದು ತನ್ನನ್ನು ಕಾಮಪ್ರೇರಿತವಾದ ಉಚ್ಛೃಂಕಲತಾಪೂರ್ಣ ಮನವಾಂಛಿತ ಕಾರ್ಯಗಳಲ್ಲಿ ಮೂಕ ಅನುಮತಿಯನ್ನು ಕೊಡುತ್ತಾನೆ. ಇದರಿಂದಲೇ ಆ ಮನ, ಬುದ್ಧಿ ಮತ್ತು ಇಂದ್ರಿಯಗಳಲ್ಲಿ ಅಡಗಿರುವ ಕಾಮವು ಜೀವಾತ್ಮನನ್ನು ವಿಷಯಗಳ ಪ್ರಲೋಭನವನ್ನು ತೋರಿಸಿ ಅವನನ್ನು ಸಂಸಾರದಲ್ಲಿ ಬೀಳಿಸುತ್ತದೆ. ಒಂದು ಪಕ್ಷ ಆತ್ಮನು ತನ್ನ ಸ್ವರೂಪವನ್ನು ತಿಳಿದು, ತನ್ನ ಸಹಜವಾದ ಶಕ್ತಿಯನ್ನು ಗುರುತಿಸಿ, ತನ್ನ ಮನ, ಬುದ್ಧಿ, ಇಂದ್ರಿಯಗಳನ್ನು ಪಡೆದು, ಅವುಗಳನ್ನು ಸ್ವೇಚ್ಛಾಚಾರದಿಂದ ಹಿಂತಿರುಗಿಸಿ, ಕಳ್ಳನಂತೆ ಅಡಗಿರುವ ಕಾಮನನ್ನು ಹೊರಗೆಳೆದು ಓಡಿಸಲು ಆಜ್ಞೆಯನ್ನಿತ್ತ ಮೇಲೆ ಇಂದ್ರಿಯ, ಮನಸ್ಸು, ಬುದ್ಧಿಗಳಲ್ಲಿ ತಾವು ಸ್ವತಃ ಏನೂ ಮಾಡುವ ಶಕ್ತಿಯಿರುವುದಿಲ್ಲ. ಮತ್ತು ಹೀಗಾದ ಮೇಲೆ ಕಾಮಕ್ಕೆ ಒಂದು ಕ್ಷಣವೂ ಸಹ ಅಲ್ಲಿ ಇರುವ ಸಾಮರ್ಥ್ಯವಿಲ್ಲ. ಆಶ್ಚರ್ಯವೆಂದರೆ, ಇವೆಲ್ಲವೂ ಆತ್ಮನಿಂದ ಸತ್ತೆಯನ್ನು ಪಡೆದು, ಸ್ಫೂರ್ತಿಯನ್ನು ಪಡೆದು, ಶಕ್ತಿಯನ್ನು ಪಡೆದು, ಆತ್ಮಬಲದಿಂದಲೇ ಬಲವಂತವಾಗಿ ಆತ್ಮನನ್ನು ದಬಾಯಿಸಿ ತಮ್ಮ ಇಷ್ಟಬಂದಂತೆ ಕೆಲಸ ಮಾಡುತ್ತವೆ. ಆತಏವ ಈಗ ಆತ್ಮಬಲವನ್ನು ಗುರುತಿಸಿ ತನ್ನನ್ನು ಪರಮಾತ್ಮನೆಂದು ತಿಳಿದು ಆತ್ಮಶಕ್ತಿಯಿಂದ ಜೀವಿಸುವ ಮನ, ಬುದ್ಧಿ,

ಇಂದ್ರಿಯಗಳನ್ನು ವಶಮಾಡಿಕೊಳ್ಳುವುದರಿಂದ ಕಾಮವು ಸಹಜವಾಗಿಯೇ ವಶವಾಗುತ್ತದೆ. ಆತ್ಮನು ಅಕ್ರಿಯ ಸ್ವರೂಪನಾದುದರಿಂದ ಅನಾತ್ಮವನ್ನು ಆಳಲು ಇದೊಂದೇ ದಾರಿ ಈ ಕಾರಣದಿಂದಲೇ ಬುದ್ಧಿಯಿಂದ ಮನಸ್ಸನು ವಶ ಮಾಡಿಕೊಂಡು ಕಾಮನನ್ನು ಜಯಿಸಬೇಕೆಂದು ಹೇಳಿದೆ.

ಪ್ರಶ್ನೆ . ಕಾಮರೂಪ ವೈರಿಯನ್ನು ದುರ್ಜಯವೆಂದು ಹೇಳುವ ಕಾರಣ ವೇನು?

ಉತ್ತರ . ವಸ್ತುತಃ ಕಾಮವು ಜಡದೃಶ್ಯವಾದುದರಿಂದ ಅದರಲ್ಲಿ ಯಾವ ಬಲವೂ ಇಲ್ಲ ಇದು ಆತ್ಮನ ಬಲದಿಂದ ಬಲವಂತವಾದದ್ದು ಬುದ್ಧಿ, ಮನಸ್ಸು ಮತ್ತು ಇಂದ್ರಿಯಗಳಲ್ಲಿ ಇರುವ ಕಾರಣದಿಂದಲೂ, ಕಾಮನಿಗೆ ಅಲ್ಲಿ ಇರಲು ಅವಕಾಶ ದೊರೆತದ್ದರಿಂದಲೂ ಅವುಗಳ ಬಲದಿಂದ ಬಲವಂತ ನಾಗಿದ್ದಾಗ ಎಲ್ಲಿಯವರೆಗೆ ಬುದ್ಧಿ, ಮನಸ್ಸು, ಇಂದ್ರಿಯಗಳು ತನ್ನ ವಶವಾಗು ವುದಿಲ್ಲವೋ ಅಲ್ಲಿಯವರೆಗೆ ಬುದ್ಧಿ, ಮನಸ್ಸು, ಇಂದ್ರಿಯಗಳ ದ್ವಾರಾ ಕಾಮಕ್ಕೆ ಬಲವು ಸಿಕ್ಕುತ್ತಿರುತ್ತದೆ ಆದುದರಿಂದ ಕಾಮವು ಅತ್ಯಂತ ಬಲವುಳ್ಳದ್ದೆಂದು ಹೇಳಲ್ಪಟ್ಟಿದೆ ಹೀಗಿರುವುದರಿಂದಲೇ ಅದು ದುರ್ಜಯವೆಂದು ಕರೆಯಿಸಿ ಕೊಂಡಿದೆ ಪರಂತು ಕಾಮದ ಈ ದುರ್ಜಯತ್ವವು ಎಲ್ಲಿಯವರೆಗೆ? ಮನಸ್ಸು, ಬುದ್ಧಿ, ಇಂದ್ರಿಯಗಳನ್ನು ಜಯಿಸುವವರೆಗೆ. ಆತ್ಮನು ತನ್ನ ಸ್ವರೂಪವನ್ನು ತಾನು ತಿಳಿದು ಬುದ್ಧಿ, ಮನಸ್ಸು, ಇಂದ್ರಿಯಗಳನ್ನು ವಶ ಪಡಿಸಿಕೊಳ್ಳುವುದೇ ಶ್ರೇಷ್ಠವಾದ ಮಾರ್ಗ

ಪ್ರಶ್ನೆ : ಇಲ್ಲಿ ಅರ್ಜುನನಿಗೆ 'ಮಹಾಬಾಹೊ' ಎಂದು ಸಂಬೋಧಿಸಲು ಕಾರಣವೇನು ?

ಉತ್ತರ . ಮಹಾಬಾಹು ಎಂಬ ಶಬ್ದವು ದೊಡ್ಡ ಭುಜಗಳುಳ್ಳವನ, ಬಲವಂತನ ವಾಚಕವಾಗಿದೆ ಮತ್ತು ಅದು ಶೌರ್ಯಸೂಚಕ ಶಬ್ದವಾಗಿದೆ. ಶ್ರೀಕೃಷ್ಣನು ಕಾಮುವನ್ನು ದುರ್ಜಯವೆಂದು ಹೇಳಿ, ಅದನ್ನು ನಾಶಮಾಡಲು ಆಜ್ಞೆ ಮಾಡುತ್ತಾ ಅರ್ಜುನನನ್ನು ಕುರಿತು 'ಮಹಾಬಾಹೊ' ಎಂದು ಸಂಬೋಧಿಸಿ ಆತ್ಮನ ಅನಂತ ಬಲವನ್ನು ನೆನಪಿಗೆ ತಂದುಕೊಟ್ಟಿರುತ್ತಾನೆ. ಮತ್ತು ಕಾಮವು ಎಂಥಾ ದುರ್ಜಯವಾಗಿದ್ದರೂ, ದುರ್ದಷ ವೈರಿಯಾಗಿ ದ್ದರೂ, ನೀನು ನಿನ್ನ ಸ್ವರೂಪದಲ್ಲಿ ಇರುವ ಅನಂತ ಶಕ್ತಿಯನ್ನು ಗುರುತಿಸಿದರೆ

ಕಾಮವನ್ನು ಸುಲಭವಾಗಿ ಜಯಿಸುವೆ – ಎಂದು ಸೂಚಿಸುವುದಕ್ಕಾಗಿ 'ಮಹಾ ಬಾಹೊ' ಎಂದು ಕರೆದಿರುತ್ತಾನೆ.

ಹಿಂದಿನ ೪೨–೪೩ನೇ ಶ್ಲೋಕಗಳ ಸಾರಾಂಶ .

ಸೂಕ್ಷ್ಮವಾಗಿಯೂ, ತಿಳಿಯುವವುಗಳಾಗಿಯೂ, ಒಳಗಿರುವವುಗಳಾಗಿಯೂ ಇರುವ ಇಂದ್ರಿಯಗಳು, ಸ್ಥೂಲವೂ, ಜಡವೂ, ಪರಿಚ್ಛಿನ್ನವೂ, ಹೊರಗಣದೂ ಆದ ದೇಹವೇ ಮೊದಲಾದ ಎಲ್ಲಾ ವಸ್ತುಗಳಿಗಿಂತ ಹೆಚ್ಚಿನ ಯೋಗ್ಯತೆಯುವೆಂದು ಹೇಳುವರು. ಆ ಇಂದ್ರಿಯಗಳಿಗಿಂತಲೂ ಇಂದ್ರಿಯ ಗಳಿಗೆ ಪ್ರೇರಕವಾದಂಥ ಮನಸ್ಸು ಹೆಚ್ಚಿನ ಯೋಗ್ಯತೆಯದು ಆ ಮನಸ್ಸಿಗಿಂತಲೂ ಆ ಮನಸ್ಸಿನ ಮೇಲೆಯೂ ಅಧಿಕಾರವನ್ನು ಮಾಡುವ ಬುದ್ಧಿಯು ಹೆಚ್ಚಿನ ಯೋಗ್ಯತೆಯದು. ಆ ಬುದ್ಧಿಗಿಂತಲೂ ಮೇಲಿನವನಾಗಿ ಎಲ್ಲಕ್ಕೂ ಒಳಗೆ ಯಾವನಿರುವನೋ, ಯಾವನನ್ನು ಕಾಮವು ಆವರಿಸಿರುವುದೆಂದು ಹೇಳಲಾಗಿದೆಯೋ, ಅವನು ಪರಮಾತ್ಮ ಹೇ ಮಹಾಬಾಹುವಾದ ಅರ್ಜುನನೇ, ಕೇಳು ವಿಷಯಗಳ ಮೇಲಿನ ಪ್ರೀತಿಯು ಪರಮಾತ್ಮನ ದರ್ಶನವಾದಾಗ ಮಾತ್ರ ಹೋಗುವುದೆಂದು ಹಿಂದೆ ಹೇಳಿದ್ದನ್ನು ಲಕ್ಷ್ಯದಲ್ಲಿಟ್ಟುಕೊಂಡು, ಹೀಗೆ ತನ್ನ ಆತ್ಮಸ್ವರೂಪವನ್ನು ಬುದ್ಧಿಗಿಂತಲೂ ಒಳಗಿನದಾಗಿ ತಿಳಿದುಕೊಂಡು, ತನ್ನ ಶುದ್ಧವಾದ ಬುದ್ಧಿಯಿಂದ ಆ ಭಾವನೆಯನ್ನು ದೃಢಪಡಿಸಿಕೊಂಡು, ಬಹು ಕಷ್ಟದಿಂದ ವಶಮಾಡಿಕೊಳ್ಳಬಹುದಾದ ಕಾಮವೆಂಬ ಹಗೆಯನ್ನು ಕೊಲ್ಲು.

ತಸ್ಮಾದಸಕ್ತಃ ಕಾರ್ಯಂ ಕರ್ಮ ಸಮಾಚರ

ಮಂಗಲಂ ಕುರುಕ್ಷೇತ್ರ ರಣಕ್ಷೋಣಿ ವಿಹಾರಿಣೆ ।
ಪಾರ್ಥಸಾರಥಿ ರೂಪಾಯ ಗೀತಾಚಾರ್ಯಾಯ ಮಂಗಲಂ ॥

ಮೂರನೆಯ ಅಧ್ಯಾಯ ಮುಗಿದುದು

ಓಂ ತತ್ಸತ್ ಪರಬ್ರಹ್ಮಾರ್ಪಣಮಸ್ತು

---

# ನಂಬಿಕೆಯು ಶಕ್ತಿ

ಡಾ|| ಬೆನ್ಸನ್‌ರವರು, ಬೋಸ್ಟನ್, ನಲವತ್ತು ವರ್ಷಗಳ ಕಾಲ ನಡೆಸಿದ ವೈದ್ಯಕೀಯ ಸಂಶೋಧನೆಯ ವರದಿಯನ್ನು 'ದಿ ಹಿಂದು' ದಿನ ಪತ್ರಿಕೆಯು ದಿನಾಂಕ 26–6–79 ರಂದು ಪ್ರಕಟಿಸಿತು ಅದರ ಛಾಯಾ ಮುದ್ರಣವು ಪಕ್ಕದಲ್ಲಿದೆ.

ಅವರ ದೀರ್ಘಕಾಲದ ಸಂಶೋಧನೆಯು ತೋರಿಸಿಕೊಟ್ಟಿರುವು ದೇನೆಂದರೆ, ನೂರಕ್ಕೆ 82 ಜನ ರೋಗಿಗಳು ಗುಣವಾದದ್ದು ಔಷಧ ಗಳಿಂದಲ್ಲ. ಅವರಿಗೆ ವೈದ್ಯರಲ್ಲಿದ್ದ ವಿಶ್ವಾಸದಿಂದ. ವೈದ್ಯರಲ್ಲಿ ವಿಶ್ವಾಸ ವನ್ನಿಟ್ಟರೆ ಸ್ಥೂಲ ಶರೀರದ ರೋಗಗಳು ವಾಸಿಯಾಗುವುವು.

ಭವರೋಗ ವೈದ್ಯನಾದ ಭಗವಂತನಲ್ಲಿ ವಿಶ್ವಾಸವಿಟ್ಟರೆ ಸ್ಥೂಲ ಶರೀರದ ಮತ್ತು ಸೂಕ್ಷ್ಮ ಶರೀರದ ರೋಗಗಳು ಗುಣವಾಗುವುವು. ಅಷ್ಟೇಕೆ, ಭವ ರೋಗವೇ ವಾಸಿಯಾಗುವುದು. ಇದು ಅಡಗೂಲಜ್ಜಿ ಕಥೆಯಲ್ಲ ವೈಜ್ಞಾನಿಕ ಸತ್ಯ

ಭಗವಂತನನ್ನು **ನಂಬಿರಿ!** ಅವನು ನೀವು ಬೇಡಿದ್ದನ್ನೆಲ್ಲಾ ಕೊಡುವನು. ನಿಮ್ಮ ಬೇಡಿಕೆಯೊಂದಿಗೆ ಕಲ್ಪನೆ ಮತ್ತು ಭಾವ ಮಿಶ್ರಿತ ವಾಗಿರಬೇಕು. ಇದು ವೈಜ್ಞಾನಿಕ ವಿಧಾನ. ಭಗವಂತನು ಭಕ್ತಿ ಪೂರ್ವಕವಾಗಿ ಅರ್ಪಿಸುವುದೆಲ್ಲವನ್ನೂ ಸ್ವೀಕರಿಸುವನು. ಶ್ರೀ ಭಗವಂತ ನೇ ಗೀತೆಯಲ್ಲಿ ಹೇಳಿರುವನು

**ಪತ್ರಂ ಪುಷ್ಪಂ ಫಲಂ ತೋಯಂ ಯೋಮೇ ಭಕ್ತ್ಯಾಪ್ರಯಚ್ಛತಿ|**
**ತದಹಂ ಭಕ್ತ್ಯುಪಹೃತಂ ಅಶ್ನಾಮಿ ಪ್ರಯತಾತ್ಮನಃ ||**

ಗೀತಾ ಅಧ್ಯಾಯ ೯, ಶ್ಲೋಕ ೨೬

ಅರ್ಥ : ಭಕ್ತನು ಭಕ್ತಿಪೂರ್ವಕವಾಗಿ ಸಮರ್ಪಿಸುವ ಪತ್ರ, ಪುಷ್ಪ, ಫಲ, ನೀರು ಇವುಗಳನ್ನು ಪ್ರೇಮದಿಂದ ನಾನು ಸ್ವೀಕರಿಸುತ್ತೇನೆ.

# ಶ್ರದ್ಧೆಯ ಫಲ

ಶ್ರೀ ಭಗವಂತನು ಶ್ರೀಮದ್ಭಗವದ್ಗೀತೆಯಲ್ಲಿ ಪದೇ ಪದೇ ಶ್ರದ್ಧೆಯ ಬಗ್ಗೆ, ಅದರ ಪರಿಣಾಮದ ಬಗ್ಗೆ ಅಪ್ಪಣೆ ಕೊಡಿಸಿರುತ್ತಾನೆ. ನಿತ್ಯ ಜೀವನದಲ್ಲಿ ಪ್ರತಿಯೊಂದಕ್ಕೂ ಶ್ರದ್ಧೆ ಬೇಕು. ಶ್ರದ್ಧೆಯಿಂದ ಮಾಡಿದ ಕೆಲಸದ ಗುಣಮಟ್ಟವು ಅಶ್ರದ್ಧೆಯಿಂದ ಮಾಡಿದ ಕೆಲಸದಕ್ಕಿಂತ ಅನೇಕ ಪಾಲು ಉತ್ತಮವಾಗಿರುವುದು. ಹಾಗೆಯೇ ಆಧ್ಯಾತ್ಮಿಕ ಕ್ಷೇತ್ರದಲ್ಲಿಯೂ ಸಹ, ಶ್ರೀ ಭಗವಂತನು ಹೇಳುತ್ತಾನೆ :–

"ಅಶ್ರದ್ಧಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।
ಅಪ್ರಾಪ್ಯಮಾಂ ನಿವರ್ತಂತೇ ಮೃತ್ಯು ಸಂಸಾರವರ್ತನಿ ॥

ಗೀತಾ ಅಧ್ಯಾಯ ೯ ಶ್ಲೋಕ ೩

ಅರ್ಥ: ಈ ಧರ್ಮದಲ್ಲಿ ಶ್ರದ್ಧೆಯಿಲ್ಲದ ಮಾನವರು ನನ್ನನ್ನು ಪಡೆಯದೆ ಮೃತ್ಯುರೂಪ ಸಂಸಾರ ಚಕ್ರದಲ್ಲಿ ತಿರುಗುತ್ತಾರೆ.

ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।

ಅಧ್ಯಾಯ ೪ ಶ್ಲೋಕ ೩೯

ಅರ್ಥ · ಇಂದ್ರಿಯಗಳನ್ನು ವಶಪಡಿಸಿಕೊಂಡ ತತ್ಪರರಾದ ಶ್ರದ್ಧಾವಂತರಿಗೆ ಜ್ಞಾನವು ಲಭಿಸುವುದು

ಅಜ್ಞಶ್ಚಾಶ್ರದ್ಧಧಾನಶ್ಚ ಸಂಶಯಾತ್ಮಾ ವಿನಶ್ಯತಿ ।
ನಾಯಂ ಲೋಕೋಽಸ್ತಿ ನ ಪರೋ ನ ಸುಖಂ
ಸಂಶಯಾತ್ಮನಃ ॥

ಗೀತಾ ಅಧ್ಯಾಯ ೪ ಶ್ಲೋಕ ೪೦

ಅರ್ಥ : ಅಜ್ಞಾನಿಯು, ಶ್ರದ್ಧೆಯಿಲ್ಲದವನು, ಸಂಶಯವುಳ್ಳವನು ಖಂಡಿತವಾಗಿ ಕೆಟ್ಟು ಹೋಗುತ್ತಾರೆ. ಸಂಶಯವುಳ್ಳವನಿಗೆ ಇಹದಲ್ಲಿಯೂ ಪರದಲ್ಲಿಯೂ ಸುಖವಿಲ್ಲ. ಇಹ ಮತ್ತು ಪರ ಎರಡಕ್ಕೂ ಶ್ರದ್ಧೆ ಬಹು ಮುಖ್ಯವಾದದ್ದು. ದಯಮಾಡಿ ಶ್ರದ್ಧಾವಂತರಾಗಿರಿ ನಿಮ್ಮನ್ನು ನೀವೇ ರೂಪಿಸಿಕೊಳ್ಳಿರಿ. ನಿಮ್ಮ ಶ್ರದ್ಧೆಯಂತೇ ನೀವಾಗುವಿರಿ. ಇದರಲ್ಲಿ ಸಂಶಯವಿಲ್ಲ "ಯೋ ಯಚ್ಛ್ರದ್ಧಃ ಸ ಏವ ಸಃ" ಗೀತಾ ಅ ೧೭ ಶ್ಲೋ ೩.